

# ಹೋಬಿಲ

ಅ.ನ.ಕೃ

ಂಡರ್ಡ್ ಬುಕ್ ಡಿಪೋ...ಬೆಂಗಳೂರು

ಮೊದಲನೆಯ ಮುದ್ರಣ: ನವೆಂಬರ್ ೧೯೫೮



ಛಾಯಾಚಿತ್ರ :
ಶ್ರೀ ಬಿ. ಕೆ. ಮೂರ್ತಿ, ಮುಂಬಯಿ



ಬೆಲೆ: ರೂ. ೧.೫೦

ಮುದ್ರಣ:
ದಿ ಈಸ್ಟರ್ನ್ ಪ್ರೆಸ್
ಜಯಚಾಮರಾಜಾ ರಸ್ತೆ ಬೆಂಗಳೂರು–೨

# ಮುನ್ನುಡಿ

**'ತಪೋಬಲ'** **'ವಿಜಯ ವಿದ್ಯಾರಣ್ಯ'** ಕೃತಿಯ ಪೂರಕವಾಗಿದೆ. **'ವಿಜಯ ವಿದ್ಯಾರಣ್ಯ'**ದಲ್ಲಿ ಕಥೆ ಮೊದಲನೆಯ ಹರಿಹರನ ನಿಧನದವರೆಗೆ ಸಾಗಿ ನಿಂತಿದೆ. ಈ ವೇಳೆಗೆ ಶ್ರೀ ವಿದ್ಯಾರಣ್ಯರ ವಯಸ್ಸು ೮೬. ಶ್ರೀಗಳವರು ಹರಿಹರನ ತರುವಾಯ ಪಟ್ಟಕ್ಕೆ ಬಂದ ಬುಕ್ಕರಾಯನ ಆಳ್ವಿಕೆ, ಅವನ ತರುವಾಯ ಪಟ್ಟಕ್ಕೆ ಬಂದ ಇಮ್ಮಡಿ ಹರಿಹರನ ಆಳ್ವಿಕೆಯ ಹತ್ತು ವರ್ಷಗಳು ಜೀವಂತರಾಗಿರುತ್ತಾರೆ. ಅವರ ಕೊನೆಯ ಮೂವತ್ತೆರಡು ವರ್ಷಗಳ ಬಾಳುವೆ **'ತಪೋಬಲ'** ದಲ್ಲಿ ಚಿತ್ರಿಸಲ್ಪಟ್ಟಿದೆ. ಈ ಎರಡು ಭಾಗದಲ್ಲಿ ಶ್ರೀವಿದ್ಯಾರಣ್ಯರ ಜೀವನಚಿತ್ರ ಪರಿಸಮಾಪ್ತಿಯಾಗುತ್ತದೆ.

ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾದಮೇಲೆ (೧೩೩೬) ಶ್ರೀ ವಿದ್ಯಾರಣ್ಯರ ಕೈವಲ್ಯದವರೆಗೆ – ಅಂದರೆ – ಐವತ್ತೊಂದು ವರ್ಷಗಳು ಶ್ರೀ ವಿದ್ಯಾರಣ್ಯರ ಜೀವನದಲ್ಲಿ ನಡೆದ ಪ್ರಧಾನ ಘಟನೆಗಳೂ ನಮಗೆ ಗೊತ್ತಿಲ್ಲ. ಇತಿಹಾಸದಲ್ಲಿ ಅಲ್ಲಲ್ಲಿ ಹರಕು ಮುರುಕಾಗಿ ಸಿಕ್ಕುವ ಸಂಗತಿಗಳನ್ನೇ ಆಧಾರವಾಗಿಟ್ಟುಕೊಂಡು ಈ ಕಥೆ ಹೆಣೆಯಲಾಗಿದೆ.

ಕೆಲವು ಯುದ್ಧಗಳ ವಿವರಗಳನ್ನುಳಿದು ನಮಗೆ ಹೆಚ್ಚು ಸಂಗತಿಗಳನ್ನು ಬುಕ್ಕರಾಯ, ಇಮ್ಮಡಿ ಹರಿಹರ ಇವರ ಬಗ್ಗೆಯೂ ಇತಿಹಾಸ ಒದಗಿಸಿಲ್ಲ. ವಿಜಯನಗರದ ಶತ್ರುಗಳನ್ನು ದಮನಮಾಡಿ, ಸಾಮ್ರಾಜ್ಯ ನಿರಾಪದವಾಗಿ ಬೆಳೆಯಲು ಬುಕ್ಕರಾಯರು ಮಾಡಿರುವ ಸೇವೆ ಅಭೂತಪೂರ್ವವಾದುದು. ಅವರ ವ್ಯಕ್ತಿಚಿತ್ರ ರೂಪಿಸುವಾಗ ಆ ಅಂಶವನ್ನೇ ಪ್ರಧಾನವಾಗಿ ಗಮನಿಸಲಾಗಿದೆ.

ಮುಂದಿನ ಕಾದಂಬರಿ **'ಪುಣ್ಯಪ್ರಭಾವ'**ದಲ್ಲಿ ಇಮ್ಮಡಿ ಹರಿಹರನ ಆಳ್ವಿಕೆ ಮುಂದುವರೆದು, ಆ ತರುವಾಯ ವಿಜಯನಗರದಲ್ಲಿ ರಾಜ್ಯಕ್ಕಾಗಿ ಉಂಟಾದ ಕ್ರಾಂತಿ, ಪ್ರತಿಕ್ರಾಂತಿಗಳು ಚಿತ್ರಿಸಲ್ಪಡುತ್ತವೆ.

**'ತಪೋಬಲ'**ದಲ್ಲಿ ಅನಿವಾರ್ಯವಾಗಿ ಬಹಮನಿ ವಂಶದ ಕಥೆ ಬೆಳೆದಿದೆ. ಅಳಿಯ ರಾಮರಾಯನ ಕಾಲದಲ್ಲಿ ಕಲ್ಬುರ್ಗಿ, ಗೋವಳಗೊಂಡ, ಬಿದರೆ, ವಿಜಾಪುರ, ಅಹಮದ್‌ನಗರಗಳು ಒಂದಾಗಿ ವಿಜಯನಗರದ ಸಾಮ್ರಾಜ್ಯವನ್ನು ನುಚ್ಚುನೂರು ಮಾಡಿದವು ಆ ರುದ್ರಚಿತ್ರದ ಪೂರ್ಣ ಕಲ್ಪನೆ ನಮಗೆ ಬರಲು, ಅದಕ್ಕೆ ಪರಿಪೋಷಕವಾದ ಸಂಗತಿಗಳು, ಮನೋಭಾವ, ಧರ್ಮಾಂಧತೆಗಳನ್ನು ತಿಳಿದಿರಬೇಕಾದುದಗತ್ಯ. ಈ ಭಾಗವನ್ನು ಸವಿಸ್ತಾರವಾಗಿ, ಮುಸ್ಲಿಮ್ ದೃಷ್ಟಿಯಲ್ಲಿ ಚಿತ್ರಿಸಿರುವ ಫೆರಿಷ್ಟನೂ ಸಾಕಷ್ಟು ವಿವರಗಳನ್ನೊದಗಿಸಿಲ್ಲ. ಇತಿಹಾಸದ ಕಣಕವನ್ನಿಟ್ಟುಕೊಂಡು, ಅದಕ್ಕೆ ಹೂರಣ ತುಂಬುವ ಕೆಲಸ ಕಾದಂಬರಿಕಾರ ಮಾಡಬೇಕಾಯಿತು. ದೃಷ್ಟಾಂತಕ್ಕೆ ಒಂದು ನಿದರ್ಶನ ಕೊಡಲು ಬಯಸುತ್ತೇನೆ.

ಫೆರಿಷ್ಟನನ್ನೇ ಆಧಾರವಾಗಿಟ್ಟುಕೊಂಡಿರುವ ಸಿವೆಲ್ ಸಾಹೇಬರು ತಮ್ಮ **'A Forgotton Empire'** ಗ್ರಂಥದಲ್ಲಿ ಬಹಮನಿ ಸುಲ್ತಾನನ ರಾಜ್ಯದಲ್ಲಾದ ಘಟನೆಗಳನ್ನು ಒಂದು ಪಂಕ್ತಿಯಲ್ಲಿ ಮುಗಿಸುತ್ತಾರೆ.

> "Daud was succeeded by Allauddin's youngest son Muhmud I, Mujahid's Sister Ruh Parvar Agah having blinded Daud's son, then a boy of eight years, in order to prevent dissension." (Page 47)

ಇದಿಷ್ಟೇ ಆಧಾರದಮೇಲೆ ನಾನು ರೂಪವರವಾರಳ ಪೂರ್ಣಚಿತ್ರ ಕಲ್ಪಿಸಿ, ಅವಳ ಅದ್ಭುತ ವ್ಯಕ್ತಿತ್ವವನ್ನು ಕಾಣಿಸಿದ್ದೇನೆ. ಸುರೈಯ್ಯಾ, ವಾಲಿ ಮಹಮದ್, ಹಾಫೀಜ್ ಜಲಂಧರಿ, ಅಯೇಷಾ ಇನ್ನಿತ್ತರ ಹಲವು ಪಾತ್ರಗಳನ್ನು ನಾನು ನಿರೂಪಣೆಯ ದೃಷ್ಟಿಯಿಂದ ಸೃಷ್ಟಿಸಬೇಕಾಯಿತು.

ಹಿಂದೂಧರ್ಮವನ್ನು ರಕ್ಷಿಸುವುದರ ಜತೆಗೆ ವಿಜಯನಗರ ಧಾರ್ಮಿಕ ಸಮಭಾವನೆ, ವಿಶ್ವಮೈತ್ರಿ ಬೆಳಸಲು ಎಷ್ಟು ಶ್ರಮಿಸಿತು ಎನ್ನುವುದನ್ನು **'ತಪೋಬಲ'**ದಲ್ಲಿ ಉಲ್ಲೇಖಿಸಿದ್ದೇನೆ.

ಗಂಗಾವತಿಯ ಶ್ರೀ ನವಲಿ ವೇದವ್ಯಾಸರಾಯರು ಒಂದು ಪತ್ರ ಬರೆದು ಉಪಯುಕ್ತ ಸೂಚನೆಯಿತ್ತಿದ್ದಾರೆ.

'ವಿಜಯನಗರದ ಬಗ್ಗೆ ಐತಿಹಾಸಿಕ ಕಾದಂಬರಿಮಾಲೆಯನ್ನು ತಾವು ಆರಂಭಿಸಿರುವುದು ಸಂತೋಷದ ಸಂಗತಿ. ಈ ಮಾಲೆಯ ಪ್ರಥಮ ಕಾದಂಬರಿಯಾದ 'ವಿಜಯ ವಿದ್ಯಾರಣ್ಯ'ವನ್ನು ಓದಿ ಆನಂದಿಸಿದ್ದೇನೆ. ಆದರೆ ಈ ಕಾದಂಬರಿಯ ಪೂರ್ವಭಾಗವೊಂದನ್ನು ತಾವು ಬರೆಯಬೇಕು. ವಿಜಯನಗರದ ಐತಿಹ್ಯದ ಹಿನ್ನೆಲೆ ಕುಮಾರರಾಮನ ರೋಮಾಂಚಕ ಕಥಾವಸ್ತುವಿದೆ ಎಂದು ತಿಳಿಸಲು ಸಂತೋಷವೆನಿಸುತ್ತದೆ.....ಕುಮಾರರಾಮನ ರಾಜ್ಯಾಡಳಿತದ ನಂತರ ವಿಜಯನಗರ ರಾಜ್ಯ ಪ್ರತಿಷ್ಠಾಪನೆಯಾಯಿತು. ಕುಮಾರರಾಮ ವಿಜಯನಗರದ ಅಡಿಗಲ್ಲು. ಹಿಂದೊಮ್ಮೆ ಕರ್ನಾಟಕ ರತ್ನಸಿಂಹಾಸನಾಧೀಶ್ವರನಾಗಿದ್ದ ಕುಮಾರರಾಮ ಬದುಕಿ ಬಾಳಿದ ಗಂಡು ಮೆಟ್ಟಿನ ಸ್ಥಳ ಕುಮ್ಮಟದುರ್ಗ – ಕುಮಾರರಾಮನ ಕಥೆ ಕನ್ನಡಿಗರಿಗೆ ಮರೆಯದಾಗಿದೆ. ಮಹಮದ್ ತಗಲಖನ ಜೊತೆ ಹೋರಾಡಿ ಸೋಲಿಸಿದ ಅಪರೂಪ ವೀರ – ಕುಮಾರರಾಮ'

ಕುಮಾರರಾಮನ ಬಗ್ಗೆ ಬರೆಯಬೇಕೆಂದು ನಾನು ಯೋಚಿಸಿದ್ದೆ. ಆದರೆ ಆ ವಿಷಯವನ್ನು ಈಗಾಗಲೇ ಕೆಲವರು ಪ್ರಸ್ತಾಪಿಸಿರುವುದರಿಂದ 'ಚರ್ವಿತ ಚರ್ವಣ' ಬೇಡವೆಂದು ಸುಮ್ಮನಿದ್ದೆ. ಶ್ರೀ ವೇದವ್ಯಾಸರಾಯರ ಸಲಹೆ ಗ್ರಾಹ್ಯವಾಗಿದೆ. ವಿಜಯನಗರದ ಚರಿತ್ರೆ, ಕುಮಾರರಾಮನ ಇತಿವೃತ್ತವಿಲ್ಲದೆ ಪೂರ್ಣವಾಗಲಾರದು. ಈ ಕಾದಂಬರಿಮಾಲೆ ಮುಗಿಯುವಲ್ಲಿ ಕುಮಾರರಾಮನ ಉಜ್ಜ್ವಲ ಜೀವನವನ್ನು ಕಾದಂಬರಿ ರೂಪದಲ್ಲಿ ಬರೆದು ನನ್ನ '**ಗಂಡುಗಲಿ ಕುಮಾರರಾಮ**'ನನ್ನು ಕನ್ನಡಿಗರ ಕೈಯಲ್ಲಿಡುತ್ತೇನೆಂದು ತಿಳಿಸಲು ಸಂತೋಷಿಸುತ್ತೇನೆ.

ಈ ಗ್ರಂಥ ಪ್ರಕಟನೆಗೆ ನೆರವಾದ ಮೆಸರ್ಸ್ ಸ್ಟ್ಯಾಂಡರ್ಡ್ ಬುಕ್ ಡಿಪೋ ಮಾಲಿಕರಾದ ಮಿತ್ರ ಶ್ರೀ ಎಚ್. ಕಮಲನಾಥರು, ಗ್ರಂಥಾರಂಭದಲ್ಲಿ ಬಂದಿರುವ ಬ್ರಹ್ಮಕೃತ '**ಶಾರದಾಸ್ತವನ**'ವನ್ನು ನನಗೆ ಹುಡುಕಿಕೊಟ್ಟ ಮಿತ್ರ ಶ್ರೀ ಕಣಗಾಲ್ ಪ್ರಭಾಕರಶಾಸ್ತ್ರಿಗಳವರು, '**ಶಾರದಾಸ್ತವನ**'ದ ಪಾಠವನ್ನು ಪರಿಶೋಧಿಸಿ, ಅದರ ಅರ್ಥ ವಿವರಣೆ ಮಾಡಿರುವ '**ಧರ್ಮಸಂದೇಶ**' ಪತ್ರಿಕೆಯ ಸಂಪಾದಕರಾದ ತಲಕಾಡು ಆಗಮಿಕ ಶ್ರೀ ಕೃಷ್ಣ ದೀಕ್ಷಿತರವರು ಇವರ ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

**೭-೧೧-೧೯೫೮** **ಅ. ನ. ಕೃ**

# ತಪೋಬಲ

## ೧

ಆಶ್ವಯುಜ ಶುಕ್ಲ ಷಷ್ಠಿ.

ನವರಾತ್ರಿ ಮಹೋತ್ಸವ ವಿದ್ಯಾಧಿದೇವಿಯ ಆರಾಧನೆಯಿಂದ ಆರಂಭವಾಗಬೇಕು.

ಊರಿನ ಜನರ ಉತ್ಸಾಹವೇ ಉತ್ಸಾಹ!

ಹೆಂಗಳೆಯರು ಮನೆಯ ಮುಂದೆ ಸಾರಿಸಿ, ಗುಡಿಸಿ, ಬಣ್ಣಬಣ್ಣದ ರಂಗವಲ್ಲಿಗಳನ್ನಿಟ್ಟಿದ್ದರು.

ಅರಮನೆಯಿಂದ ವಿರೂಪಾಕ್ಷ ದೇವಾಲಯದವರೆಗೂ ಹಸಿರುವಾಣಿಯ ಚಪ್ಪರಗಳು, ತಳಿರು ತೋರಣಗಳು.

ಹಬ್ಬದ ಉತ್ಸಾಹದಲ್ಲಿದ್ದ ಪುರಜನರೆಲ್ಲಾ ಹಾದಿಗಳಲ್ಲಿ ಸಾಲುಗಟ್ಟಿ ನಿಂತು, ಪೂಜೆಗೆ ಹೋಗಲಿದ್ದ ಅರಸು, ಅರಸಿತಿಯರನ್ನು ಗೌರವಿಸಲು ನಿಂತಿದ್ದಾರೆ.

ರಾಯರು ಅರಮನೆ ಬಿಟ್ಟು ಹೊರಟಕೂಡಲೆ ಕೊಂಬು, ಕಹಳೆಗಳ ನಿನಾದವಾಯಿತು; ಮಂಗಳವಾದ್ಯಗಳು ಮೊಳಗಿದವು; ವಂದಿ ಮಾಗಧರು ಪರಾಕು ಹೇಳಿದರು.

ಜನ ಪರಮೋತ್ಸಾಹದಿಂದ

‘ ಜಯ ಶ್ರೀ ಪಂಪಾಪತಿ
ಜಯ ಶ್ರೀ ಭುವನೇಶ್ವರಿ
ಜಯ ಶ್ರೀ ಶಾರದಾದೇವಿ
ಜಯ ಶ್ರೀ ಮಹಾರಾಜಾಧಿರಾಜ ಬುಕ್ಕರಾಯ ’

ಎಂದು ಉದ್ಘೋಷಿಸಿದರು.

ಅರಸು ಶುಭ್ರಸ್ನಾತನಾಗಿ, ದಿವ್ಯ ಪೀತಾಂಬರ ಧರಿಸಿ, ಸ್ವರ್ಣದುಕೂಲ ಹೊದೆದುಕೊಂಡಿದ್ದಾನೆ. ತ್ರಿಗುಣಾತ್ಮಕವಾದ ತ್ರಿಪುಂಡ್ರ ಅವನ ಹಣೆಯಲ್ಲಿ ವಿರಾಜಿಸುತ್ತಿದೆ. ಶಿವನ ಹಣೆಗಣ್ಣಿನ ಪ್ರತೀಕದಂತಿದ್ದ ರಕ್ತಕುಂಕುಮ ಅವನ ಭ್ರೂಮಧ್ಯ ಪ್ರದೇಶವನ್ನಲಂಕರಿಸಿದೆ.

ದೊರೆ ಬರಿಗಾಲಿನಲ್ಲೇ ನಡೆದಿದ್ದಾನೆ.

ರಾಣಿ ಗೌರಾಂಬಿಕೆ ತೈಲಾಂಭ್ಯಂಜನಮಾಡಿ, ಶುಭ್ರ ಶ್ವೇತವಸನ ಧಾರಿಯಾಗಿದ್ದಾಳೆ. ಚಿನ್ನದ ಹರಿವಾಣದಲ್ಲಿ ಅವಳೇ ಪೂಜಾದ್ರವ್ಯಗಳನ್ನು ಹಿಡಿದಿದ್ದಾಳೆ.

ಮಂಗಳ ವಾದ್ಯಗಳ ಸಾಲು ಮುಂನ್ನಡೆಯಲು, ಬಿಚ್ಚುಗತ್ತಿ ಪಡೆಯವರು, ಅವರ ಹಿಂದೆ ರಾಜಲಾಂಛನಗಳನ್ನು ಹೊತ್ತವರು ನಡೆದಿದ್ದಾರೆ. ಅವರ ಹಿಂದೆ ಕಂಪಣ್ಣ, ಮಾರಪ್ಪ, ಮುದ್ದಪ್ಪನಾಯಕರು ಸೌಮ್ಯವೇಷಧಾರಿಗಳಾಗಿ ನಡೆದಿದ್ದಾರೆ. ಅವರ ಹಿಂದೆಯೇ ಅರಸು, ಅರಸಿತಿ.

ಅವರನ್ನನುಸರಿಸಿ ಗಿರಿಜಾ, ಸೀತಮ್ಮ, ಇತರ ಚೇಟಿಯ್ರು ಚಿನ್ನದ ತಟ್ಟಿಗಳಲ್ಲಿ ಪೂಜಾಸಾಮುಗ್ರಿಗಳನ್ನು ಹಿಡಿದು ಹೊರಟಿದ್ದಾರೆ.

ದಾರಿಯುದ್ದಕ್ಕೂ ಪುರಸ್ತ್ರೀಯರು ಅರಸು, ಅರಸಿತಿಯರಿಗೆ ಆರತಿ ಬೆಳಗಿ ಹೂವೆರಚುತ್ತಿದ್ದಾರೆ.

ವೈಭವಪೂರ್ಣವಾಗಿ ಅಲಂಕೃತವಾಗಿದ್ದ ಪಂಪಾನಾಥನ ದೇವಾಲಯ ದಲ್ಲಿ ಸಹಸ್ರಾರುಮಂದಿ ಸೇರಿ, ಪ್ರಭುವಿನಾಗಮನ ನಿರೀಕ್ಷಿಸುತ್ತಿದ್ದಾರೆ.

ಸರ್ವವ್ಯಾಪಿಯಾಗಿದ್ದ ಶ್ರೀಕಂಠ ವ್ಯವಸ್ಥೆಯನ್ನು ಪರಾಮರ್ಶಿಸಿ ಜನರ ಸದ್ದಡಗಿಸಲು ಪ್ರಯತ್ನಿಸುತ್ತಿದ್ದಾನೆ.

ಪ್ರಭು, ಪ್ರಭು ಪರಿವಾರದ ಮೆರವಣಿಗೆ ದೇವಾಲಯದ ಸಮೀಪಗತ ವಾಗಲು ಶ್ರೀಕಂಠ, ಪರ್ಣಕುಟಿ ಸೇರಿ, ಶ್ರೀಗುರು ವಿದ್ಯಾರಣ್ಯರಿಗೆ

"ದೊರೆಗಳ ಮೆರವಣಿಗೆ ದೇವಾಲಯದ ಬೀದಿಯತ್ತ ತಿರುಗಿದೆ"

ಎಂದು ಬಿನ್ನವಿಸಿಕೊಂಡ.

ಕೈಯಲ್ಲಿ ಧರ್ಮದಂಡ ಹಿಡಿದ ಶ್ರೀಗುರುಗಳು ಸಾಯಣರೊಡಗೂಡಿ ದೇವಾಲಯದ ಮಹಾದ್ವಾರದ ಬಳಿ ಬಂದರು.

ದೇವಾಲಯದ ಮಹಾದ್ವಾರದ ಬಳಿಗೆ ಬಂದ ದೊರೆ, ರಾಜಾಶೀರ್ವಾದ

ವಾಗುತ್ತಿರಲು, ರಾಣಿಯೊಂದಿಗೆ ಶ್ರೀಗುರುಗಳಿಗೂ, ಸಾಯಣಾಚಾರ್ಯರಿಗೂ ಅಭಿವಂದಿಸಿ ಅವರೊಂದಿಗೆ ಭುವನೇಶ್ವರಿಯ ಮಹಾಮಂದಿರ ಸೇರಿದ.

ವಿಧ್ಯುಕ್ತ ಪೂಜೆ ಶ್ರೀಗುರುಗಳ ನೇತೃತ್ವದಲ್ಲಿ ಆರಂಭವಾಯಿತು.

ಪೂಜೆ ಮುಗಿಯಲು ಅರ್ಚಕರು ಕರ್ಪೂರದಾರತಿ ಸಿದ್ಧಗೊಳಿಸಿದರು.

ಪಂಪಾನಾಥನ ದೇವಾಲಯದ ನೂರಾರು ಗಂಟೆಗಳು ಏಕಕಾಲದಲ್ಲಿ ಪ್ರಣವಧ್ವಾನಮಾಡಿದವು.

ಶ್ರೀಗುರುಗಳು ಎದ್ದು ನಿಲ್ಲಲು, ಸಮಸ್ತರೂ ಎದ್ದು ಭಯ ಭಕ್ತಿಯಿಂದ ಕೈಜೋಡಿಸಿ ನಿಂತರು.

ಭುವನೇಶ್ವರಿಯ ಪಕ್ಕದಲ್ಲಿ ವಿರಾಜಿಸುತ್ತಿದ್ದ ವಿದ್ಯಾ ಸರಸ್ವತಿಯ ಶ್ವೇತ ಶಿಲಾಮೂರ್ತಿಯ ಮೇಲೆ ಕರ್ಪೂರದಾರತಿಯ ಕೆಂಬೆಳಗು ಮೂಡಿ, ಅದಕ್ಕೆ ಅಪೂರ್ವ ತೇಜಸ್ಸನ್ನಿತ್ತಿತ್ತು. ಶ್ರೀಗುರುಗಳು ಮೂರ್ತಿಯನ್ನು ಕಣ್ತುಂಬ ನೋಡಿ, ಧ್ಯಾನಾಸಕ್ತರಾಗಿ ನಿಂತರು. ಅವರ ಕಣ್ಣುಗಳಿಂದ ಧಾರಾಕಾರವಾಗಿ ಆನಂದಬಾಷ್ಪ ಒಸರುತ್ತಿತ್ತು. ದೇವಿಯ ತೇಜಃಪ್ರಭಾವ ದಿಂದ ಮಹಾಯೋಗಿ ಮಹಾಕವಿಯಾಗಿದ್ದ.

ಶ್ರೀ ಗುರುಗಳ ಶ್ರೀಕಂಠದಿಂದ ದೇವಿಯ ದಿವ್ಯವಿಲಾಸವನ್ನು ಚಿತ್ರಿಸುವ ಮಹಾಸ್ತವನ ಹೊರಹೊಮ್ಮಿತು

ಶುದ್ಧಾಂ ಬ್ರಹ್ಮವಿಚಾರ ಸಾರಪರಮಾಮಾದ್ಯಾಂ ಜಗದ್ವ್ಯಾಪಿನೀಂ ।
ವೀಣಾ ಪುಸ್ತಕಧಾರಿಣೀಮಭಯದಾಂ ಜಾಡ್ಯಾಂಧಕಾರಾಪಹಾಂ ॥
ಹಸ್ತೇ ಸ್ಫಾಟಿಕಮಾಲಿಕಾಂ ವಿದಧತೀಂ ಪದ್ಮಾಸನೇ ಸಂಸ್ಥಿತಾಂ ।
ವಂದೇ ತಾಂ ಪರಮೇಶ್ವರೀಂ ಭಗವತೀಂ ಬುದ್ಧಿಪ್ರದಾಂ ಶಾರದಾಂ ॥೧॥

ಹ್ರೀಂ ಹ್ರೀಂ ಹ್ರೀಂ ಹೃದ್ಯಬೀಜೇ ಶಶಿರುಚಿವಿಮಲೇ ಕಲ್ಪವಿಸ್ಪಷ್ಟಶೋಭೇ।
ಭವ್ಯೇ ಭವ್ಯಾನುಕೂಲೇ ಕುಮತಿವನದಹೇ ವಿಶ್ವವಂದ್ಯಾಂಘ್ರಿಪದ್ಮೇ ॥

---

ಪರಿಶುದ್ಧ ಸ್ವರೂಪಳೂ, ಬ್ರಹ್ಮವಿಚಾರ ರಹಸ್ಯದಲ್ಲಿಯೇ ತಾತ್ಪರ್ಯ ವುಳ್ಳವಳೂ, ಜಗದಾದಿ ಕಾರಣಳೂ, ಸರ್ವ ಜಗತ್ತನ್ನೂ ವ್ಯಾಪಿಸಿರುವವಳೂ ವೀಣೆಯನ್ನೂ ಪುಸ್ತಕವನ್ನೂ ಧರಿಸಿ ಅಭಯ ಮುದ್ರೆಯಿಂದ ಭಕ್ತಜನರ ಜಾಡ್ಯ (ಅಜ್ಞಾನ) ವೆಂಬ ಕತ್ತಲೆಯನ್ನು ಪರಿಹರಿಸುವವಳೂ, ಮತ್ತೊಂದು ಕೈಯಲ್ಲಿ ಸ್ಫಟಿಕ ಮಾಲಿಕೆಯನ್ನು ಧರಿಸಿ ಪದ್ಮಾಸನದಲ್ಲಿ ಮಂಡಿಸಿರುವವಳೂ ಸದ್ಬುದ್ಧಿದಾಯಿನಿಯೂ ಆದ ಭಗವತಿ ಶ್ರೀ ಶಾರದಾ ಪರಮೇಶ್ವರಿಯನ್ನು ನಮಸ್ಕರಿಸುವೆನು. ॥೧॥

ದಿವ್ಯೇ ಪದ್ಮೋಪವಿಷ್ಟೇ ಪ್ರಣತಜನ ಮನೋಮೋದ ಸಂಪಾದಯಿತ್ರಿ ।
ಪ್ರೋತ್ಫುಲ್ಲ ಜ್ಞಾನಕೂಟೇ ಹರಿಜನಿದಯಿತೇ ದೇವಿ ಸಂಸಾರಸಾರೇ ॥೨॥

ಐಂ ಐಂ ಐಂ ಜಾಪ್ಯತುಷ್ಟೇ ಹಿಮರುಚಿಮುಕುಟೇ ವಲ್ಲಕೀ ವ್ಯಗ್ರಹಸ್ತೇ ।
ಮಾತರ್ಮಾತರ್ನಮಸ್ತೇ ದಹ ದಹ ಜಡತಾಂ ದೇಹಿ ಬುದ್ಧಿಂ ಪ್ರಶಸ್ತಾಂ॥
ವಿದ್ಯೇ ವೇದಾಂತಗೀತೇ ಶ್ರುತಿಪರಿಪಠಿತೇ ಮೋಕ್ಷದೇ ಮುಕ್ತಿಮಾರ್ಗೇ ।
ಮಾರ್ಗಾತೀತ ಸ್ವರೂಪೇ ಭವ ಮಮ ವರದಾ ಶಾರದೇ ಶುಭ್ರವರ್ಣೇ॥೩॥

ಧೀಂ ಧೀಂ ಧೀಂ ಧಾರಣಾಖ್ಯೇ ಧೃತಿಮತಿನುತಿಭಿರ್ನಾಮಭಿಃ ಕೀರ್ತನೀಯೇ।
ನಿತ್ಯೇ ನಿತ್ಯಾನುನೀತೇ ಮುನಿವರನಮಿತೇ ನೂತನೇ ವೈ ಪುರಾಣೇ ॥
ಪುಣ್ಯೇ ಪುಣ್ಯಪ್ರವಾಹೇ ಹರಿಪರನಮಿತೇ ಪೂರ್ಣತತ್ವೇ ಸುವರ್ಣೇ ।
ಮಾತರ್ಮಾತ್ರಾರ್ಥತತ್ವೇ ಮತಿ ಮತಿ ಮತಿದೇ ಮಾಧವೇ ಪ್ರಿ ತಿಯುಕ್ತೇ।೪।

ಕ್ಲೀಂ ಕ್ಲೀಂ ಕ್ಲೀಂ ಸ್ವಸ್ವರೂಪೇ, ದಹದಹ ದುರಿತಂ ಪುಸ್ತಕೈರ್ವ್ಯಗ್ರಹಸ್ತೇ।
ಸಂತುಷ್ಟಾಕಾರಚಿತ್ತೇ ಸ್ಮಿತಮುಖಿ ಶುಭದೇ ಜೃಂಭಿಣೀಸ್ತಂಭವಿದ್ಯೇ ।
ಮೋಧೇ ಮುಗ್ಧೇ ಪ್ರಮೋದೇ ಮಮಕುರು ಕುಮತಿಧ್ವಾಂತವಿಧ್ವಂಸಮೀಡ್ಯೇ।
ಗೀ, ಗೌ, ರ್ವಾಗ್ಭಾರತೀ ತ್ವಂ ಕವಿವರರಸನಾ ಸಿದ್ಧಿದಾಸಿದ್ಧವಿದ್ಯಾ ।೫॥

ಸೌಃ ಸೌಃ ಸೌಃ ಶಕ್ತಿಬೀಜೇ ಕಮಲಭವಮುಖಾಂಭೋಜ ಭಾನುಸ್ವರೂಪೇ।
ರೂಪಾರೂಪಪ್ರಕಾಶೇ ಸಕಲಗುಣಮಯೇ ನಿರ್ಗುಣೇ ನಿರ್ವಿಕಾರೇ ॥
ನ ಸ್ಥೂಲೇ ನೈವ ಸೂಕ್ಷ್ಮೇಽಪ್ಯವಿದಿತವಿಭವೇ ಜಾಪ್ಯವಿಜ್ಞಾನತತ್ವೇ ।
ವಿಶ್ವೇ ವಿಶ್ವಾಂತರಾಳೇ ಸುರವರನಮಿತೇ ನಿಷ್ಕಳೇ ನಿತ್ಯಶುದ್ಧೇ ॥೬॥

---

ಹ್ರೀಂಕಾರಾತ್ಮಕವಾದ ಮನೋಹರ ಬೀಜಮಂತ್ರದಿಂದ ತೃಪ್ತಳಾಗುವ, ಬೆಳದಿಂಗಳಂತೆ ಆಹ್ಲಾದಕರವಾದ ದೇಹಕಾಂತಿಯಿಂದಲೂ, ಧರಿಸಿದ ನವರತ್ನಾಭರಣಗಳಿಂದಲೂ ಪರಿಶೋಭಿಸುತ್ತಲಿರುವ, ಶ್ರೇಯಸ್ಸಿದ್ಧಿಗೆ ಅನುಗ್ರಹಮಾಡುತ್ತ ದುಷ್ಟಬುದ್ಧಿಯೆಂಬ ಅರಣ್ಯಕ್ಕೆ ಕಾಡ್ಗಿಚ್ಚಿನಂತಿರುವ, ಸರ್ವರಿಂದಲೂ ನಮಸ್ಕರಿಸಲ್ಪಡುವ ಪಾದಪದ್ಮಗಳುಳ್ಳವಳಾಗಿ ಲೋಕೋತ್ತರಳಾದ, ಪದ್ಮದಲ್ಲಿ ಕುಳಿತಿರುವ, ನಮಸ್ಕರಿಸುವವರ (ಆಶ್ರಯ ಕೋರಿ ಬಂದವರ) ಮನಸ್ಸಿಗೆ ಆನಂದವನ್ನುಂಟುಮಾಡುವ, ಸ್ಪಷ್ಟವಾದ ಜ್ಞಾನರಾಶಿಯಂತಿರುವ (ಜ್ಞಾನಸ್ವರೂಪಿಣಿಯಾದ), ಬ್ರಹ್ಮದೇವನ ಪ್ರಿಯೆಯಾಗಿ ಸಂಸಾರಸಾರಭೂತಳಾದ ಶ್ರೀ ಶಾರದಾದೇವಿಯೇ ನಿನಗೆ ನಮಸ್ಕಾರವು. ॥೨॥

ಐಂಕಾರಮಂತ್ರಜಪದಿಂದ ತುಷ್ಟಳಾಗುವ ತಾಯೇ, ಹಿಮಕಾಂತಿಯಂತೆ ಕಂಗೊಳಿಸುವ ಕಿರೀಟವುಳ್ಳವಳೇ, ವೀಣೆಯನ್ನು ನುಡಿಸುವುದರಲ್ಲಿಯೇ ಆಸಕ್ತಗಳಾದಕೈಗಳುಳ್ಳ, ವಿದ್ಯಾಸ್ವರೂಪಿಣಿಯಾದ, ವೇದಾಂತಗಳಿಂದ (ಉಪನಿಷತ್ತು) ಹೊಗಳಲ್ಪಡುವ ಮಾತೆಯೇ! ವೇದದಲ್ಲಿ ಹೇಳಲ್ಪಟ್ಟಿರುವ ಮೋಕ್ಷವನ್ನು ಕೊಡುವ

ಸ್ತೌಮಿ ತ್ವಾಂತ್ವಾಂ ಚ ವಂದೇ ಭಜ ಮಮ ರಸನಾಂ ಮಾ ಕದಾಚಿತ್ತ್ಯಜೇಥಾಃ।
ಮಾ ಮೇ ಬುದ್ಧಿರ್ವಿರುದ್ಧಾ ಭವತು ಮಮ ಮನೋ ಯಾತು ದೇವೀ–
ಹ ಪಾಪಂ ॥

ಮಾ ಮೇ ದುಃಖಂ ಕದಾಚಿತ್ಕ್ವಚಿದಪಿ ಸಮಯೇ ಪುಸ್ತಕೇನಾಕುಲತ್ವಂ ।
ಶಾಸ್ತ್ರೇ ವಾದೇ ಕವಿತ್ವೇ ಪ್ರಸರತು ಮಮ ಧೀರ್ಮಾಸ್ತು ಕುಂಠಾ ಕದಾಪಿ ॥೭॥

ಇತ್ಯೇತ್ಯೈಃ ಶ್ಲೋಕಮುಖ್ಯೈಃ ಪ್ರತಿದಿನಂಮುಷಸಿ ಸ್ತೌತಿ ಯೋ ಭಕ್ತಿನಮ್ರೋ ।
ವಾಣ್ಯಾ ವಾಚಸ್ಪತೇರಪ್ಯತಿಶಯತಿ ವಿಭು ವಾರ್ಕ್ಪಟುತ್ವಂ ಚ ಶೀಘ್ರಂ ॥
ಸಸ್ಯಾದಿಷ್ಟಾರ್ಥಲಾಭೀ ಸುತಮಿವ ಸತತಂ ಸಾಪಿ ತಂ ಪಾತು ದೇವೀ ।
ಸೌಭಾಗ್ಯಂ ತಸ್ಯ ಲೋಕೇ ಪ್ರಸರತು ಕವಿತಾ ವಿಘ್ನ ಅಸ್ತಂ ಪ್ರಯಾತು ॥೮॥

ನಿರ್ವಿಘ್ನಂ ತಸ್ಯ ವಿದ್ಯಾ ಪ್ರಭವತು ಸತತಂ ಪ್ರಸ್ತುತ ಗ್ರಂಥಬೋಧಃ ।
ಕೀರ್ತಿಸ್ತ್ರೈಲೋಕ್ಯಮಧ್ಯೇ ನಿವಸತು ವದನೇ ಶಾರದಾ ತಸ್ಯ ಸಾಕ್ಷಾತ್ ॥
ದೀರ್ಘಾಯುರ್ಲೋಕಪೂಜ್ಯೋ ಗುಣನಿಧಿರನಿಶಂ ರಾಜಮಾನ್ಯೋವದಾನ್ಯೋ
ವಾಗ್ದೇವ್ಯಾಃ ಸಂಪ್ರಸಾದಾ ತ್ತ್ರಿಜಗತಿ ವಿಜಯೀಜಾಯತೇ ಸತ್ಸಭಾಸು ॥೯॥

---

ಹಾಗೂ ಮೋಕ್ಷಮಾರ್ಗ ಸ್ವರೂಪಳಾದ, ವಿವಿಧವಾದ ಉಪಾಸನಾ ಮಾರ್ಗಗಳಿಗೂ ನಿಲುಕದ ಶುಭ್ರವರ್ಣ ಸ್ವರೂಪಳಾದ ಮಾತೆ ಶಾರದೆಯೇ, ನಿನಗೆ ನಮಸ್ಕಾರವು ; ನನಗೆ ವರವನ್ನು ಕರುಣಿಸು ; ನನ್ನ ಜಡತೆಯನ್ನು (ಆಲಸ್ಯವನ್ನು) ಸುಡು, ಪ್ರಶಸ್ತವಾದ ಬುದ್ಧಿಯನ್ನು ಕೊಡು. ॥೩॥

ಧೀಂ ಬೀಜಾತ್ಮಕಳಾಗಿ ಧಾರಿಣಿಯೆಂಬ ಅನ್ವರ್ಥನಾಮದಿಂದ ಪ್ರಸಿದ್ಧಳಾದವಳೇ, ದೃಢವಾದ ಮನಸುಳ್ಳವರಿಂದ (ಜಿತೇಂದ್ರಿಯರಾದ ಜ್ಞಾನಿಗಳಿಂದ) ಅನಂತ ದಿವ್ಯನಾಮಗಳಿಂದ ಸ್ತುತಿಸಲ್ಪಡುವವಳೇ, ನಿತ್ಯಳೂ, 'ನಿತ್ಯ'ರೆಂಬ ದೇವತಾ ಸಮೂಹದಿಂದ ಸೇವಿಸಲ್ಪಡುವವಳೂ ಋಷಿಮುನಿಗಳಿಂದ ನಮಸ್ಕರಿಸಲ್ಪಡುವವಳೂ, ಹೊಸದು – ಹಳೆಯದು ಎಂಬ ಸರ್ವವಸ್ತು ಸ್ವರೂಪಳೂ, ಹರಿಹರಾದಿಗಳಿಂದ ಸ್ತುತ್ಯವಾದ ಪೂರ್ಣತತ್ವದಿಂದ ಪ್ರಕಾಶಮಾನವಾಗಿರುವವಳೂ, 'ಮಾತ್ರಾ' ತತ್ವ ಪ್ರತಿಪಾದ್ಯಳೂ, ಮಾಧವನಲ್ಲಿ ಮಮತೆಯುಳ್ಳವಳೂ ಆದ ಶಾರದೆಯೇ ಶುದ್ಧವಾದ ಬುದ್ಧಿಯನ್ನನುಗ್ರಹಿಸಿ ಕರುಣಿಸು. ॥೪॥

ಕ್ಲೀಂ ಮಂತ್ರವೇ ತನ್ನ ಸ್ವರೂಪವಾಗುಳ್ಳವಳೇ, ಆನಂದಸೂಚಕವಾದ ಆಕಾಶ ಮತ್ತು ಮನಸ್ಸುಳ್ಳವಳೇ, ಹಸನ್ಮುಖಿಯಾಗಿ ಶುಭವನ್ನು ಕೊಡುವವಳೇ, ಜೃಂಭಿಣೀ ಸ್ತಂಭನಾದಿ ವಿದ್ಯಾಸ್ವರೂಪಿಣಿಯೂ, ಮೇಧಾ ಸ್ವರೂಪಳೂ (ಜ್ಞಾನಸ್ವರೂಪಳೂ), ಸಹಜ ಮತ್ತು ಆನಂದ ಸ್ವರೂಪಳೂ ಆಗಿ ಕವಿಶ್ರೇಷ್ಠರಿಗೆ ವಾಕ್ಸಿದ್ಧಿಯನ್ನು ಕೊಡುವವಳೇ, ಸರ್ವಸಿದ್ಧಿ ಸಂಪನ್ನಳೇ, ಗೀಃ, ಗೌಃ, ವಾಕ್, ಭಾರತೀ ಮುಂತಾದ ನಾಮಗಳಿಂದ ಪ್ರಸಿದ್ಧಳಾದ ಶ್ರೀ ಶಾರದೆಯೇ ನನ್ನ ಪಾಪಗಳನ್ನೆಲ್ಲಾ ಪರಿಹರಿಸು, ದುರ್ಬುದ್ಧಿಯೆಂಬ ಕತ್ತಲೆಯನ್ನು ನಾಶಮಾಡು. ॥೫॥

ಬ್ರಹ್ಮಚರ್ಯಸ್ಥಿತೋ ಮೌನೀ ತ್ರಯೋದಶ್ಯಾಂ ನಿರಾಮಿಷಃ ।
ಸಾರಸ್ವತೈಃ ಶತೈಃ ಪಾಠೈಃ ಸಸ್ಯಾದಿಷ್ಟಾರ್ಥಲಾಭಭಾಕ್ ॥೧೦॥

ಪಕ್ಷದ್ವಯೋಃ ತ್ರಯೋದಶ್ಯಾಂ ಏಕವಿಂಶತಿ ಸಂಖ್ಯಯಾ ।
ಅವಿಚ್ಛೇದಂ ಪಠೇ ದ್ಧೀಮಾನ್ ಧ್ಯಾತ್ವಾ ದೇವೀಂ ಸರಸ್ವತೀಮ್ ॥೧೧॥

ಸರ್ವಕಾಮ ಸಮಾಯುಕ್ತಃ ಸರ್ವಲೋಕೇಷು ವಿಶ್ರುತಃ ।
ವಾಂಛಿತಂ ಫಲಮಾಪ್ನೋತಿ ಲೋಕೇಽಸ್ಮಿನ್ನಾತ್ರಸಂಶಯಃ ॥೧೨॥

---

ಸೌಃ ಎಂಬ ಶಕ್ತಿಬೀಜ ಸ್ವರೂಪಿಣಿಯೇ, ಬ್ರಹ್ಮನ ಮುಖ ಕಮಲಗಳಿಗೆ ಸೂರ್ಯ ಕಿರಣದಂತಿರುವವಳೇ ವ್ಯಕ್ತಾವ್ಯಕ್ತ (ಕಾಣುವ – ಕಾಣದಿರುವ) ಪ್ರಪಂಚವನ್ನೆಲ್ಲಾ ಪ್ರಕಾಶಪಡಿಸುವವಳೇ, ಸರ್ವಗುಣ ಮಂಡಿತಳೇ, ಕಳಾರಹಿತಳೇ, ಪ್ರಪಂಚರಹಿತಳಾಗಿ ಸ್ಥೂಲಳೂ – ಸೂಕ್ಷ್ಮಳೂ ಅಲ್ಲದವಳೇ, ಯಾರಿಂದಲೂ ತಿಳಿಯಲ್ಪಡದ ಮಹಿಮೆಯುಳ್ಳವಳೇ, ಮಂತ್ರತತ್ವಸ್ವರೂಪಳೇ, ಸರ್ವ ಜಗತ್ಸ್ವರೂಪಳೂ ಸರ್ವ ಜಗತ್ತಿನ ತತ್ವ ಸ್ವರೂಪಳೂ ನಿತ್ಯಶುದ್ಧಳೂ (ಸರ್ವಗುಣ ಸಂಪನ್ನಳೂ) ಆದ ಶ್ರೀ ಶಾರದೆಯೇ ಕರುಣಿಸು. ॥೬॥

ದೇವಿ! ನಿನ್ನನ್ನು ಸ್ತುತಿಸುವೆನು. ನಮಸ್ಕರಿಸುವೆನು. ನನ್ನ ನಾಲಿಗೆಯಲ್ಲಿ ನೆಲಸು; ಅದನ್ನು ಎಂದಿಗೂ ಬಿಡಬೇಡ! ನನ್ನ ಬುದ್ಧಿಯು ಎಂದಿಗೂ ವಿರುದ್ಧವಾಗದಿರಲಿ. ನನ್ನ ಮನಸ್ಸು ಪಾಪವನ್ನುಹೊಂದದಿರಲಿ. ಪುಸ್ತಕಗಳನ್ನೋದುವುದರಲ್ಲಿ ಬರೆಯುವುದರಲ್ಲಿ ಯಾವಾಗಲೂ ಬೇಸರವಾಗದಿರಲಿ. ನನಗೆ ಎಲ್ಲಿಯೂ ಯಾವಾಗಲೂ ದುಃಖವಿಲ್ಲದಿರಲಿ. ಶಾಸ್ತ್ರದಲ್ಲಿಯೂ ವಾದದಲ್ಲಿಯೂ ಕವಿತೆಯಲ್ಲಿಯೂ ನನ್ನ ಬುದ್ಧಿಯು ಶಕ್ತಿವಿಹೀನವಾಗದೇ ಪ್ರಸರಿಸಲಿ. ॥೭॥

ಹಿಂದೆ ಹೇಳಿದ ಮುಖ್ಯ ಶ್ಲೋಕಗಳಿಂದ ಶ್ರೀ ಶಾರದಾ ದೇವಿಯನ್ನು ಭಕ್ತಿಯುಕ್ತನಾಗಿ ಪ್ರತಿದಿನವೂ ಯಾವನು ಬೆಳಗಿನಜಾವದಲ್ಲಿ ಸ್ತೋತ್ರಮಾಡುವನೋ ಅವನು (ಶ್ರೀ ಶಾರದೆಯ ಕೃಪೆಯಿಂದ) ಬೇಗನೆ ಮಾತಿನಲ್ಲಿ ಬೃಹಸ್ಪತಿಯನ್ನೂ ಮೀರಿಸಬಲ್ಲವನಾಗುವನು. ವಾಚಾಳಿಯಾಗುವನು. ಸಕಲೇಷ್ಟಾರ್ಥಗಳನ್ನು ಪಡೆಯುವನು. ಶ್ರೀ ದೇವಿಯು ಅಂತಹವರನ್ನು ಯಾವಾಗಲೂ ಮಗನಂತೆ ಕಾಪಾಡಲಿ; ಅವನ ಕವಿತೆಯೂ, ಸೌಭಾಗ್ಯವೂ (ಕೀರ್ತಿಯೂ) ಲೋಕದಲ್ಲಿ ಹರಡಲಿ; ಅವನ ಎಲ್ಲಾ ವಿಘ್ನಗಳೂ ನಾಶವಾಗಲಿ. ॥೮॥

ಯಾವಾಗಲೂ ಅವನ ವಿದ್ಯೆಯು ನಿರ್ವಿಘ್ನವಾಗಿ ಸಾಗಲಿ. ಪಠಿಸುವ ಗ್ರಂಥವು ಯಥಾವತ್ತಾಗಿ ತಿಳಿದು ಬರಲಿ; ಅವನ ಕೀರ್ತಿಯು ಮೂರು ಲೋಕದಲ್ಲಿಯೂ ಶಾರದೆಯ ಮುಖದಲ್ಲಿಯೂ ನೆಲೆಸಲಿ; ದೀರ್ಘಾಯುಸ್ಸುಳ್ಳವನೂ, ಲೋಕಪೂಜ್ಯನೂ ಗುಣನಿಧಿಯೂ ರಾಜಮಾನ್ಯನೂ ದಾನಶೀಲನೂ ಆಗಿ ವಿರಾಜಿಸಲಿ. ಶ್ರೀ ವಾಗ್ದೇವಿಯ ಪ್ರಸಾದದಿಂದ ಮೂರು ಲೋಕದಲ್ಲಿಯೂ (ಸತ್ಸಭೆಯಲ್ಲಿಯೂ) ಜಯಶಾಲಿಯಾಗಲಿ. ॥೯॥

ಧ್ಯಾನಪರವಶನಾಗಿದ್ದ ಅರಸನಮುಂದೆ ಅರ್ಚಕ ಆರತಿಯ ತಟ್ಟೆ ಹಿಡಿದ. ರಾಣಿ ಗೌರಾಂಬಿಕೆ ಮೆಲ್ಲನೆ ಅರಸನನ್ನು ಎಚ್ಚರಿಸಿದಳು.

ದೊರೆ ಮಂಗಳಾರತಿ ಸ್ವೀಕರಿಸಿದ.

ಪ್ರಸಾದ ವಿನಿಯೋಗ ಆರಂಭವಾಗಲು, ಅರಸ ಅರಸಿತಿ, ಯುವರಾಜ, ರಾಜ ಸೋದರರು, ಶ್ರೀಗುರುಗಳನ್ನೂ ಸಾಯಣಾಚಾರ್ಯರನ್ನೂ ಅನುಸರಿಸಿ, ಪರ್ಣಕುಟಿ ಪ್ರವೇಶಿಸಿದರು.

ಎಲ್ಲರೂ ಕೃಷ್ಣಾಜಿನಗಳ ಮೇಲೆ ಕುಳಿತುಕೊಳ್ಳಲು ಶ್ರೀಗುರುಗಳು,

"ಶುಭ ವಾತಾವರಣದಲ್ಲಿ ನವರಾತ್ರಿ ಆರಂಭವಾಗಿದೆ. ಶ್ರೀ ಭುವನೇಶ್ವರಿ ಸಂತೃಪ್ತಳಾಗಿದ್ದಾಳೆ."

"ಗುರ್ವಾಶೀರ್ವಾದ. – ಕಂಪಣ್ಣನಾಯಕರು ಒಂದು ಅರಿಕೆ ಮಾಡಿಕೊಳ್ಳಲು ಉತ್ಸುಕರಾಗಿದ್ದಾರೆ."

"ಹೇಳಿ ನಾಯಕರೇ – ನಮ್ಮಲ್ಲಿಯೂ ನೀವು ಸಂಕೋಚ ಪಡಬೇಕೇ?"

"ಕಂಚೀ ಪ್ರದೇಶದಲ್ಲಿ ಭದ್ರವಾದ ಪಡವೀಡು ದುರ್ಗವನ್ನು ಸಂಭವ ರಾಯ ಆಕ್ರಮಿಸಿಕೊಂಡು, ವಿಜಯನಗರಕ್ಕೆ ಹಲವು ತೆರನಲ್ಲಿ ಕಿರುಕುಳ ಕೊಡುತ್ತಿದ್ದಾನೆ. ರೂಕ್ಷನಾದ ಈ ವನ್ಯರಾಜನನ್ನು ದಂಡಿಸಬೇಕಾದುದು ಅಗತ್ಯವಾಗಿದೆ. ನಾನು ಪಡವೀಡು ದುರ್ಗದಮೇಲೆ ದಂಡೆತ್ತಿ ಹೊರಡಲು ಸಿದ್ಧನಾಗಿದ್ದೇನೆ. ಪೂಜ್ಯ ಸಾಯಣಾಚಾರ್ಯರು ನನ್ನ ಮಂತ್ರಿಗಳಾಗಿದ್ದುಕೊಂಡು, ಮಾರ್ಗದರ್ಶನ ಮಾಡಬೇಕಲ್ಲದೆ, ನಾನು ಹಿಂದಿರುಗಿ ಬರುವ ವರೆಗೆ ರಾಜ್ಯ ಸೂತ್ರಗಳನ್ನು ನಿರ್ವಹಿಸಬೇಕೆಂದು ಪ್ರಾರ್ಥಿಸುತ್ತೇನೆ."

ಸಾಯಣರು ತಲೆಯಲ್ಲಾಡಿಸುತ್ತಾ

"ದಯೆಯಿಟ್ಟು ರಾಜಕಾರಣಕ್ಕೆ ನನ್ನನ್ನು ಎಳೆಯಬೇಡಿ. ವೇದ

---

ಬ್ರಹ್ಮಚರ್ಯ ವ್ರತದಲ್ಲಿದ್ದು ತ್ರಯೋದಶೀ ದಿವಸ ಈ ಸಾರಸ್ವತ ಶ್ಲೋಕಗಳನ್ನು ನೂರುಸಲ ಪಠಣಮಾಡಿದರೆ ಇಷ್ಟಾರ್ಥವು ಕೈಗೊಳ್ಳುವುದು. ॥೧೦॥

ಎರಡು ಪಕ್ಷಗಳ ತ್ರಯೋದಶೀ ದಿವಸಗಳಲ್ಲಿ ಎಡೆಬಿಡದೇ ಇಪ್ಪತ್ತೊಂದು ಬಾರಿ ಈ ಸ್ತೋತ್ರವನ್ನು ಪಠಿಸುವುದರಿಂದ ಎಲ್ಲಾ ಇಷ್ಟಾರ್ಥಗಳನ್ನೂ ಪಡೆದು ಲೋಕ ವಿಖ್ಯಾತವಾದ ಕೀರ್ತಿಯನ್ನುಗಳಿಸಿ ಬೇಕಾದ ಫಲವನ್ನೂ ಹೊಂದುವನು; ಇದರಲ್ಲಿ ಸಂಶಯವಿಲ್ಲ. ॥೧೧॥ ॥೧೨॥

ಭಾಷ್ಯದ ಕೆಲಸ ಹೊರೆಹೊರೆಯಾಗಿ ನಿಂತಿರುವಾಗ ನಾನು ರಾಜ್ಯಸೂತ್ರಗಳನ್ನು ವಹಿಸಿಕೊಳ್ಳುವುದೂ, ರಾಜಕೀಯ ರಣರಂಗ ಪ್ರವೇಶಿಸುವುದೂ ಅನುಚಿತ ವಾಗುತ್ತದೆ."

"ತಾಯಿ ಮೀನಾಕ್ಷಿಯ ಆವಾಸಸ್ಥಾನವಾದ ಮಧುರೆ ಯವನರ ಕೈ ವಶವಾಗಿರುವುದಲ್ಲವೇ ಕಂಪಣ್ಣನಾಯಕರೇ ?"

ಎಂದು ಶ್ರೀಗುರುಗಳು ಪ್ರಶ್ನಿಸಿದರು.

"ಮದಿಸಿರುವ ಸಂಭವರಾಯ, ಮಧುರೆಯ ಯವನರ ಸಖ್ಯ ಬೆಳಸಿ ನಮ್ಮ ಉದ್ದೇಶಕ್ಕೇ ಭಂಗತರಬಹುದು. ಅವನು ಪ್ರಬಲನಾಗುವ ಮುನ್ನವೇ ಅವನ ಅಧಟನ್ನು ಮುರಿಯಬೇಕೆಂದು ನನ್ನ ಆಶಯ."

"ವೇದಭಾಷ್ಯ ಮುಗಿಯುವವರೆಗೆ ಸಾಯಣರು ನಿಮಗೆ ನೆರವು ನೀಡಲು ಹೇಗೆ ಸಾಧ್ಯ ?"

ಕಂಪಣ್ಣನಾಯಕರು ಅವನತಮುಖಿಗಳಾದರು.

ಶ್ರೀಗುರುಗಳ ವ್ಯಂಗ್ಯೋಕ್ತಿಯ ಅರ್ಥವನ್ನರಿತ ಬುಕ್ಕರಾಯರು

"ಕಂಪಣ್ಣನಾಯಕರು ತಮ್ಮ ಪರವಾಗಿಯಲ್ಲದೆ, ನಮ್ಮ ಪರ ವಾಗಿಯೂ ಪ್ರಾರ್ಥಿಸಿದ್ದಾರೆ. ಶ್ರೀ ಸಾಯಣಾಚಾರ್ಯರು ತಮ್ಮ ನಿರ್ಧಾರ ವನ್ನು ಪುನರಾಲೋಚಿಸಬೇಕಾಗಿ ಬೇಡಿಕೊಳ್ಳುತ್ತೇನೆ."

ಶ್ರೀ ಗುರುಗಳು ಸಾಯಣರ ಕಡೆ ತಿರುಗಿ

"ಸಾಯಣರೇ, ವೇದಭಾಷ್ಯ ನೀವು ಮುಗಿಸಬೇಕೆಂದು ನಿಯತಿಯ ಇಚ್ಛೆ. ಅದಕ್ಕೆ ಯಾವ ಅಡ್ಡಿ ಆತಂಕವೂ ಬರುವುದಿಲ್ಲ. ಅದರ ಜತೆಯಲ್ಲಿ ಅತ್ಯಗತ್ಯವಾಗಿ ನೀವು ನಿರ್ವಹಿಸಬೇಕಾದ ಕರ್ತವ್ಯವೂ ಒಂದಿದೆ. ಯವನ ಪೀಡೆಯಿಂದ ನಾವು ಈ ನಾಡನ್ನು ಪಾರುಮಾಡದಿದ್ದರೆ ವೇದಭಾಷ್ಯ ಬರೆದೇನು ಸಾರ್ಥಕ ? ವೇದಗಳೇ ಯವನ ಪದಾಘಾತಕ್ಕೆ ಸಿಕ್ಕಿರುವಾಗ ನಮ್ಮ ಭಾಷ್ಯ ಸಿಕ್ಕದೆ ಇರುತ್ತದೆಯೇ ? – ಹಿಂದೂಧರ್ಮದ ಅಸ್ತಿತ್ವವೇ ಅಲುಗಾಡುತ್ತಿರುವ ಈ ಪರ್ವಕಾಲದಲ್ಲಿ ನಾವು ಕೇವಲ ಭಾಷ್ಯಕಾರರಾಗಿ ಕುಳಿತರೆ ಸಾಲದು – ವೇದ ಸಂರಕ್ಷಕರಾಗಿ ಧರ್ಮದ ಕತ್ತಿಯನ್ನೂ ಹಿರಿಯಬೇಕಾಗುತ್ತದೆ. ಕಂಪಣ್ಣನಾಯಕರು ಹೇಳುತ್ತಿರುವುದು ಸೂಕ್ತವಾಗಿದೆ. ಅವರ ಪ್ರಾರ್ಥನೆ ಯನ್ನು ನೀವು ನಿರಾಕರಿಸಬಾರದೆಂದು ನನ್ನ ಅಪೇಕ್ಷೆ."

ಸಾಯಣರು ಕ್ಷಣಕಾಲ ಆಲೋಚಿಸಿ

"ನಿಜ ನಿಜ – ಈ ಪುಣ್ಯಭೂಮಿಯಲ್ಲಿ ವೇದ ವೇದಾಂಗಗಳು ಅಮರ

ವಾಗಿ ಉಳಿಯಬೇಕೆಂದು ಬಯಸುವ ನಾವು ರಾಷ್ಟ್ರರಕ್ಷಣೆಗೆ ಗಮನ ಕೊಡ ಬೇಕಾದುದು ಅತ್ಯಗತ್ಯ. ಶ್ರೀ ಕಂಪಣ್ಣನಾಯಕರ ಜತೆ ಹೊರಡಲು ನಾನು ಸಿದ್ಧನಾಗಿದ್ದೇನೆ. ತಾವು ಅಪ್ಪಣೆಕೊಡಿಸಿದಂತೆ ವೇದಭಾಷ್ಯ ರಚನೆಗೆ ನಾಲ್ಕು ದಿನ ತಡವಾದರೂ ಚಿಂತೆಯಿಲ್ಲ."

ದೊರೆಗಳು, ಕಂಪಣ್ಣನಾಯಕರು ಸುಪ್ರೀತರಾದರು.

ವಿಚಾರಪರವಶರಾಗಿದ್ದ ಶ್ರೀಗುರುಗಳು

"ಇದೇ ಸಂದರ್ಭದಲ್ಲಿ ನನ್ನ ಸ್ವಂತದ ಒಂದು ಮಾತನ್ನು ಹೇಳಿಬಿಡು ತ್ತೇನೆ. ವಿಜಯದಶಮಿ ಮುಗಿದ ಕೂಡಲೆ ನಾನು ಶ್ರೀ ಕಾಶೀಕ್ಷೇತ್ರಕ್ಕೆ ಹೋಗಿ ಕೆಲಕಾಲವಿದ್ದು ವಿಶ್ವೇಶ್ವರನ ಸೇವೆ ಮಾಡಿ ಜಾನ್ಹವಿಯಲ್ಲಿ ಮಿಂದು ಪುನೀತನಾಗಿ ಬರಲು ನಿಶ್ಚಯಿಸಿದ್ದೇನೆ. ದೊರೆಗಳು ಅಪ್ಪಣೆ ಕೊಡಬೇಕು"

ದೊರೆ ಕೈಜೋಡಿಸಿ,

"ಗುರುನಾಥಾ – ತಮಗೆ ಅಪ್ಪಣೆ ಕೊಡಲು ನಾನು ಎಷ್ಟರವನು – ತಮ್ಮನ್ನಗಲಿ ನಾನಾಗಲಿ, ರಾಜಧಾನಿಯಾಗಲಿ ಇರಲು ಹೇಗೆ ಸಾಧ್ಯ ?"

"ಕೆಲಕಾಲ ಶ್ರಮಿಸಿ ನಾನು ಸಂಗ್ರಹಿಸಿದ ಶಕ್ತಿಯನ್ನು ಬಳಸಿಬಿಟ್ಟಿ ದ್ದೇನೆ ದೊರೆಗಳೇ. ಲೌಕಿಕ ಭಂಡಾರ ತೆರವಾದ ಕೂಡಲೆ, ಅದನ್ನು ಹೇಗೆ ತುಂಬಬೇಕೋ ಹಾಗೆ ಆಧ್ಯಾತ್ಮಿಕ ಭಂಡಾರವನ್ನೂ ಕಾಲಕಾಲಕ್ಕೆ ತುಂಬು ತ್ತಿರಬೇಕು. ನಾವು ಉಪೇಕ್ಷೆ ಮಾಡಿದರೆ ಭಂಡಾರದಲ್ಲಿ ಮುತ್ತು ರತ್ನಗಳ ಬದಲು ಗೆದ್ದಲು, ಮೂಷಿಕಗಳು ಸೇರಿಕೊಳ್ಳುತ್ತವೆ. ಕಾಶಿಗೆ ಹೋಗಿ ಬರಲು ನನಗೆ ಅನುಮತಿ ಕೊಡಿ."

"ಆಗಬಹುದು – ಆದರೊಂದು ಕರಾರಿಗೆ ತಾವು ಒಪ್ಪಬೇಕು"

"ಹೇಳಿ."

"ರಾಜಗುರುಯೋಗ್ಯವಾದ ಪರಿವಾರ, ವೈಭವದೊಂದಿಗೆ ತಾವು ಪ್ರಯಾಣ ಬೆಳಸಬೇಕು."

"ಕೆಲಕಾಲವಾದರೂ ಲೌಕಿಕಜೀವನದಿಂದ ದೂರವಿರಬೇಕೆಂದು ಬಯಸುತ್ತಿರುವ ನಾನು, ಅದನ್ನೇ ಜತೆಯಲ್ಲಿ ಕಟ್ಟಿಕೊಂಡು ಹೋಗಲೇ ? ನನ್ನ ಜತೆಗೆ ಶ್ರೀಕಂಠ ಬರುತ್ತಾನೆ – ಸಾಕು."

"ಚಿತ್ತವಿದ್ದಂತಾಗಲಿ"

ಎಂದು ದೊರೆಗಳು ಮ್ಲಾನವದನರಾಗಲು ಶ್ರೀಗುರುಗಳು ಅವರನ್ನು ಕರುಣಾರ್ದ್ರದೃಷ್ಟಿಯಿಂದ ನೋಡಿ

"ಪ್ರಭುಗಳ ಮನಸ್ಸು ಖಿನ್ನವಾಗಬಾರದು" ಎಂದರು.

"ಶ್ರೀಗುರುಚರಣಗಳಿಗೆ ನಾವು ಯಾವ ಸೇವೆಯನ್ನರ್ಪಿಸುವುದಕ್ಕೂ ಅವಕಾಶವೇ ಇಲ್ಲವಾಗಿದೆ."

"ಏಕಿಲ್ಲ?"

ಎಂದು ಶ್ರೀಗುರುಗಳು ನಸುನಗುತ್ತಾ

"ರಾಜಧಾನಿಯಲ್ಲಿ ನಾವು ಇರಲಿ, ಇಲ್ಲದಿರಲಿ ಸತತವಾಗಿ ವೇದ ಘೋಷ ನಡೆಯುತ್ತಿರಬೇಕೆಂದು ನಮ್ಮ ಬಯಕೆ. ಪ್ರಭುಗಳು ಒಂದು ಅಗ್ರಹಾರ ನಿರ್ಮಿಸಿ ಕಾಶ್ಮೀರದ ವಿದ್ವಾಂಸರನ್ನು ಬರಮಾಡಿಕೊಳ್ಳಬೇಕು. ಅವರ ನೆರವಿನಿಂದ 'ಗೀರ್ವಾಣ ಮಹಾವಿದ್ಯಾಪೀಠ' ಆರಂಭವಾಗಿ ದೇಶಾದ್ಯಂತ ಇರುವ ವಿದ್ವಜ್ಜನರಿಗೆಲ್ಲಾ ವಿದ್ಯಾಪೀಠ ಆಶ್ರಯವಾಗಬೇಕು. ಈ ನಮ್ಮ ಹಿರಿಬಯಕೆಯನ್ನು ಪ್ರಭುಗಳು ಸಾರ್ಥಕಗೊಳಿಸಬೇಕು."

"ನಾನು ಸಾರ್ಥಕಗೊಳಿಸುವುದೇ ಗುರುದೇವ. ತಮ್ಮ ಚರಣಧೂಳಿಯಾದ ನಾನು ಇದನ್ನು ಮಹದಾಜ್ಞೆಯೆಂದು ಭಾವಿಸಿ ಶಿರಸಾಧರಿಸಿ ನೆರವೇರಿಸುತ್ತೇನೆ."

ಎಂದು ಆಶ್ವಾಸನವಿತ್ತರು.

ದೊರೆಗಳು, ಅವರ ಪರಿವಾರ ಶ್ರೀಗುರುಗಳಿಗೂ, ಸಾಯಣಾಚಾರ್ಯರಿಗೂ ಅಭಿವಂದಿಸಿ ಮೇಲಕ್ಕೆದ್ದರು.

ಮಂಗಳವಾದ್ಯಗಳು ಮತ್ತೆ ಮೊಳಗಿದವು.

ಶ್ರೀಗುರುಗಳು, ಸಾಯಣರು ಹೊರಬಾಗಿಲಿನವರೆಗೆ ಬಂದು ಪ್ರೀತಿಪುರಸ್ಸರವಾಗಿ ದೊರೆಗಳನ್ನು ಬೀಳ್ಕೊಟ್ಟರು.

## ೨

ಶ್ರೀಗುರುಗಳ ಪ್ರಯಾಣಕ್ಕೆ ಐದೇ ದಿನಗಳುಳಿದವು. ರಾಜಧಾನಿಯನ್ನೊಮ್ಮೆ ಪರಾಮರ್ಶಿಸಿ ಬಂದ ಶ್ರೀಗುರುಗಳ ಮನಸ್ಸಿನಲ್ಲಿ ದೊಡ್ಡ ಆಂದೋಲನವಾರಂಭವಾಗಿತ್ತು.

'ಹಂಪೆಯಲ್ಲಿ ಯಾವನು ಶ್ರೀ ವಿರೂಪಾಕ್ಷನಾಗಿರುವನೋ ಅವನೇ ಅಲ್ಲವೇ ಕಾಶಿಯಲ್ಲಿ ಶ್ರೀ ವಿಶ್ವನಾಥನಾಗಿರುವುದು. ಮಹಾ ಸಾಮ್ರಾಜ

ವೊಂದರ ವಿಕಾಸವಾಗುತ್ತಿರುವಾಗ ನಾನು ಕಾಶಿಗೆ ಹೋಗುವುದು ಉಚಿತವೇ?'

'ಸಾಮ್ರಾಜ್ಯದ ಕೆಲಸ ಅರ್ಧಕ್ಕೇ ಕೈಬಿಟ್ಟು ಹೋದಂತಾಗುವುದಿಲ್ಲವೇ ?'

ಎಂದು ಯೋಚಿಸುತ್ತ ಕುಳಿತರು.

ಗುರುಗಳ ಯೋಚನೆಯ ಕಾರಣವನ್ನರಿಯಲು ಶ್ರೀಕಂಠ ಕುತೂಹಲಿಯಾಗಿದ್ದರೂ, ಧೈರ್ಯಗೊಂಡು ಅವರನ್ನು ಪ್ರಶ್ನಿಸಲು ಆವನ ಮನಸ್ಸು ಹಿಂಜರಿಯುತ್ತಿತ್ತು.

ಶ್ರೀಕಂಠನ ಸಂದಿಗ್ಧ ಮನಸ್ಕತೆಯನ್ನರಿತ ಶ್ರೀ ಗುರುಗಳು

"ಕಾಶೀಯಾತ್ರೆ ನಿಂತುಹೋಗಬಹುದೆಂದು ಯೋಚನೆಯಾಗಿದೆಯೇ ಶ್ರೀಕಂಠ"

ಎಂದು ಕೇಳಿದರು.

"ಹೂ – ಹೂ ; ಇಲ್ಲ – ಇಲ್ಲ ಗುರುಗಳೇ"

ಎಂದು ಶ್ರೀಕಂಠ ತಡವರಿಸಿದ.

ಶ್ರೀಗುರುಗಳು ನಸುನಕ್ಕು

"ನನ್ನ ಮನಸ್ಸು ಆಂದೋಲನಕ್ಕೀಡಾಗಿದೆ ಶ್ರೀಕಂಠ" ಎಂದರು.

"ಏಕೆ ಗುರುಗಳೇ ?"

"ಶ್ರೀ ಶ್ರೀ ಬುಕ್ಕರಾಯರು ಈಗ ತಾನೇ ಪಟ್ಟಕ್ಕೆ ಬಂದಿದ್ದಾರೆ. ಎಲ್ಲ ಉತ್ತರವಾದಿತನವನ್ನೂ ಅವರ ಹೆಗಲಮೇಲೆ ಒರಗಿಸಿ, ನಾನು ಕಾಶೀಗೆ ಪ್ರಯಾಣ ಬೆಳಸುವುದು ಉಚಿತವೇ ಎಂಬ ಧರ್ಮಸಂಕಟ ಕಾಡುತ್ತಿದೆ. ಶ್ರೀ ಸಾಯಣರು ಇಲ್ಲಿದ್ದಿದ್ದರೆ ನನಗೆ ಯೋಚನೆ ಇರುತ್ತಿರಲಿಲ್ಲ. ಅವರು ಕಂಪಣ್ಣನಾಯಕರ ಜತೆ ಹೊರಡುವುದು ಅನಿವಾರ್ಯವಾಗಿದೆ."

ನಿರಾಶೆಗೊಂಡ ಶ್ರೀಕಂಠನ ಮುಖ ತೇಜೋಹೀನವಾಯಿತು.

"ಹಾಗಾದರೆ ಕಾಶಿಯ ಪ್ರಯಾಣ ನಿಂತಂತೆಯೇ !"

ಶಿಷ್ಯನ ಸ್ಥಿತಿ ನೋಡಿ ನಕ್ಕ ಗುರುಗಳು,

"ನಾನು ಹೋಗದಿದ್ದರೂ ನಿನ್ನನ್ನು 'ಕಳುಹಿಸಿಕೊಡುತ್ತೇನೆ' ಶ್ರೀಕಂಠ. ನೀನು ನಿರಾಶೆಗೊಳ್ಳಬೇಕಾದುದಿಲ್ಲ."

"ನಿಮ್ಮನ್ನು ಬಿಟ್ಟು ನಾನು ಹೋಗುತ್ತೇನೆಯೇ ಗುರುಗಳೇ ?"

"ಕಾಶಿಯನ್ನು ನೋಡಲು ನೀನು ಆತುರನಾಗಿಲ್ಲವೇ ?"

"ಆಗಿದ್ದೇನೆ. ಆದರೆ........"

"ಆದರೆ........"

"ನಿಮ್ಮೊಬ್ಬರನ್ನೇ ಬಿಟ್ಟು ಹೋಗಲು ಮನಸ್ಸಾಗುವುದಿಲ್ಲ ಗುರುಗಳೇ. ಭಯೋತ್ಪಾದಕ ಇರುಳನ್ನೂ ಗಮನಿಸದೆ ನೀವು ಹೇಮಕೂಟದ ತಪ್ಪಲಿಗೆ ನಡೆದು ಬಿಡುತ್ತೀರಿ. ದುಷ್ಟ ಮೃಗಗಳಿಗೆ ನೀವೆಲ್ಲಿ ತುತ್ತಾಗುವಿರೋ ಎಂದು ನನ್ನ ಮನಸ್ಸು ಕಾತರಗೊಳ್ಳುತ್ತದೆ."

"ನಾವು ದುಷ್ಟಮೃಗಗಳಿಗೆ ಅಂಜಬೇಕಾದುದಿಲ್ಲ ಶ್ರೀಕಂಠ."

"ಅವತ್ತು ನಿಮ್ಮ ಗುಹೆಯಮುಂದೆ ಬಂದು ನಿಂತ ಚಿರತೆಯನ್ನು ನೋಡಬೇಕಾಗಿತ್ತು ಗುರುಗಳೇ. ಅದನ್ನು ಸ್ಮರಿಸಿಕೊಂಡರೆ ಇಂದಿಗೂ ನನ್ನ ಮೈ ನವಿರೇಳುತ್ತದೆ."

"ಮನುಷ್ಯನ ಶತ್ರು ಮನುಷ್ಯನೇ ವಿನಾ ಮೃಗವಲ್ಲ ಶ್ರೀಕಂಠ. ಒಲವು ಮೃಗದ ಹೃದಯವನ್ನೂ ಗೆಲ್ಲಬಲ್ಲುದು. ಆದರೆ ಪಾಶವೀವೃತ್ತಿಯನ್ನವಲಂಬಿಸುವ ಮನುಷ್ಯ ಪಶುವಿಗಿಂತಲೂ ಕ್ರೂರಿಯಾಗುತ್ತಾನೆ."

"ಈ ಮೃಗ – ಮಾನವನನ್ನು ಗೆಲ್ಲುವುದು ಹೇಗೆ?"

"ಅಂತಸ್ಸತ್ವದಿಂದ."

"ಅಂತಸ್ಸತ್ವ ದೊರಕಿಸಿಕೊಳ್ಳುವುದು ಹೇಗೆ?"

"ಆತ್ಮಾರ್ಪಣದಿಂದ. ನನ್ನದು ಎನ್ನುವುದನ್ನು ಈಶ್ವರಾರ್ಪಿತ ಮಾಡಿದರೆ, ತನ್ನದೆನ್ನುವುದನ್ನು ಈಶ್ವರ ನಮಗೆ ಧಾರೆಯೆರೆಯುತ್ತಾನೆ."

"ತಾವು ಕಾಶಿಯಿಂದ ಹಿಂದಿರುಗುವವರೆಗೆ ಈಶ್ವರಪಥದಲ್ಲಿ ಸಾಮ್ರಾಜ್ಯವನ್ನು ಮುನ್ನಡೆಸುವವರು ಯಾರು ಗುರುದೇವ?"

"ಸಾಮ್ರಾಜ್ಯ ಕೂಡ ತನ್ನ ಬಲವನ್ನು ತಾನು ಅವಲಂಬಿಸಬೇಕಲ್ಲದೆ ನನ್ನನ್ನು ಅವಲಂಬಿಸಬಾರದು. ನಾನು ಅಮರನೇ?—ಹುಟ್ಟು, ಸಾವು ನನ್ನನ್ನೂ ಬಿಟ್ಟದ್ದಲ್ಲ. ನಾಳೆ ನಾನು – ಇಲ್ಲವಾದಮೇಲೆ ಸಾಮ್ರಾಜ್ಯದ ಆಧ್ಯಾತ್ಮಿಕ ಬಲ ಕುಂದುವುದೇ?"

"ಆ ಪ್ರಶ್ನೆಗೆ ಉತ್ತರ ಹೇಳಲು ನಾನು ಅಸಮರ್ಥ."

"ಕುಂದಬಾರದು ಶ್ರೀಕಂಠ. ಲೌಕಿಕ ಸಾಮ್ರಾಜ್ಯದ ಬೆಳೆಯೊಂದಿಗೆ ಆಧ್ಯಾತ್ಮಿಕ ಸಾಮ್ರಾಜ್ಯವೂ ಬೆಳೆಯುತ್ತ ಹೋಗಬೇಕು. ಅದು ಯಾವ ವ್ಯಕ್ತಿಯನ್ನೂ ಅವಲಂಬಿಸಬಾರದು—ಸದ್ಯಕ್ಕಂತೂ ನೀನು ಯೋಚಿಸಬೇಕಾಗಿಲ್ಲ. ತಪೋಧನರಾದ ಕಾಶೀವಿಲಾಸ ಕ್ರಿಯಾಶಕ್ತಿಗಳು ರಾಜಗುರುಗಳಾಗಿರುವವರೆಗೆ ನಾವು ಅಂಜಬೇಕಾಗಿಲ್ಲ."

ಎಂದನ್ನುತ್ತಾ ಶ್ರೀ ಗುರುಗಳೆದ್ದು ಕಿಟಕಿಯಿಂದಾಚೆ ಕಾಣುತ್ತಿದ್ದ ವಿಜಯನಗರದ ಸಿಂಹಾವಲೋಕನ ಮಾಡುತ್ತಾ

"ಎಷ್ಟು ಕೆಲಸ – ಎಷ್ಟು ಕೆಲಸ ಉಳಿದಿವೆ ಶ್ರೀಕಂಠ. ನಮ್ಮ ಜನರ ಆಲಸ್ಯ ಸ್ವಭಾವ ಕಂಡು ನನಗೊನ್ಮೆ ಹಿಡಿಸಲಾರದಷ್ಟು ಕೋಪ ಬರುತ್ತದೆ. ನೂರು ವರ್ಷಗಳಲ್ಲಿ ಸಾಧಿಸಬಹುದಾದುದನ್ನು ನಾವು ಹತ್ತು ವರ್ಷಗಳಲ್ಲಿ ಸಾಧಿಸಬೇಕು; ಹತ್ತು ವರ್ಷಗಳಲ್ಲಿ ಸಾಧ್ಯವಾದುದನ್ನು ಒಂದೇ ವರ್ಷದಲ್ಲಿ ಸಾಧಿಸಬೇಕು. ಜಗನ್ನಾಥಸ್ಥಪತಿಗಳನ್ನೂ ಅವರ ರೂವಾರಿಗಳನ್ನೂ ಬರಮಾಡು – ಎಲ್ಲ ದಣ್ಣಾಯಕರನ್ನೂ ಬರಮಾಡು – ಊರಿನ ಪ್ರಮುಖ ನಾಗರಿಕರನ್ನು ಬರಮಾಡು – ಕರ್ತವ್ಯಲೋಪಕ್ಕೆ ಯಾರೂ ಗುರಿಯಾಗ ಬಾರದು."

ಶ್ರೀಗುರುಗಳು ವಯೋಧರ್ಮವನ್ನು ಗಣನೆಗೇ ತಂದುಕೊಳ್ಳಲಿಲ್ಲ. ಹಗಲಿರುಳೂ ಬಗೆಬಗೆಯ ವೃತ್ತಿಯವರನ್ನು, ತಾಂತ್ರಿಕರನ್ನು, ರಾಜಸೂತ್ರ ಚಾಲಕರನ್ನು ಕಂಡು ವಿಧಾಯಕ ಕಾರ್ಯಗಳನ್ನು ಅವರಿಗೊಪ್ಪಿಸಿದರು.

ದ್ವಾದಶಿಯ ದಿನ ದೊರೆಯಿಂದ ವೀರವೀಳ್ಯ ಸ್ವೀಕರಿಸಿದ ಕಂಪಣ್ಣ ನಾಯಕರು, ಸಾಯಣಾಚಾರ್ಯರೊಂದಿಗೆ ಪ್ರಯಾಣ ಬೆಳೆಸಿದರು.

ತ್ರಯೋದಶಿಯ ಶುಭದಿನ ಬ್ರಾಹ್ಮೀ ಮುಹೂರ್ತದಲ್ಲಿ ಶ್ರೀ ಗುರುಗಳು, ಶ್ರೀಕಂಠನೊಂದಿಗೆ ಹೊರಡಲನುವಾದರು.

ಬೀಳ್ಕೊಡಲು ಬಂದಿದ್ದ ದೊರೆಯನ್ನೂ, ದೊರೆಯ ಪರಿವಾರವನ್ನೂ ಊರ ಹೆಬ್ಬಾಗಿಲಿನಲ್ಲಿ ನಿಲ್ಲಲು ಹೇಳಿ ವೀರಸನ್ಯಾಸಿ, ಕಂಕುಳಲ್ಲಿ ಕೃಷ್ಣಾಜಿನ, ಕೈಯಲ್ಲಿ ಕಮಂಡಲಪಾತ್ರೆ ಹಿಡಿದು ವಾರಣಾಶಿಯ ಅಭಿಮುಖರಾದರು.

## ೩

ಮಹಮದ್ ಬಿನ್ ತೊಘಲಕನಂತರ ದಿಲ್ಲಿ ಸಿಂಹಾಸನವನ್ನೇರಿದವರು ತೀರ ದುರ್ಬಲರಾಗಿದ್ದರು. ದಕ್ಷಿಣದಲ್ಲಿ ತೊಘಲಕ್ ಸಂಪಾದಿಸಿದ್ದ ರಾಜ್ಯಗಳು ಒಂದೊಂದಾಗಿ ಸುಲ್ತಾನಶಾಹಿಯಿಂದ ಬಿಡುಗಡೆ ಹೊಂದಿ ಸ್ವತಂತ್ರವಾದವು. ದಕ್ಷಿಣದಲ್ಲಿದ್ದ ಸುಲ್ತಾನನ ನೂರಾರು ಹಣಕಾಸಿನ ಅಧಿಕಾರಿಗಳು ದಿಲ್ಲಿಗೆ ಹಣ ಕಳಿಸುವ ಪರಿಪಾಠವನ್ನೇ ಬಿಟ್ಟುಬಿಟ್ಟರು. ಈ ಅಮೀರರು ತಮ್ಮಲ್ಲಿ ಒಬ್ಬನಾದ

ಇಸ್ಮಾಯಿಲ್ ಮುಖ್‌ನನ್ನು ದಕ್ಷಿಣದ ದೊರೆಯೆಂದು ದೌಲತಾಬಾದಿನಲ್ಲಿ ಸಾರಿದರು. ನಾಸಿರುದ್ದೀನ್ ಎಂಬ ಹೆಸರನ್ನು ಸ್ವೀಕರಿಸಿದ ಇಸ್ಮಾಯಿಲ್ ಸುಲ್ತಾನನ ಸೈನ್ಯಗಳನ್ನು ಎದುರಿಸಬೇಕಾಯಿತು. ಹರ್ಸ ಜಾಫರ್ ಖಾನನ ನಾಯಕತ್ವದಲ್ಲಿ ಬಂದ ಇನ್ನೊಂದು ಸೈನ್ಯದ ತುಕಡಿ ಸುಲ್ತಾನನ ಸೈನ್ಯವನ್ನು ಹಿಮ್ಮೆಟ್ಟಿಸಿತ್ತು. ಸುಖಲೋಲುಪನಾದ ನಾಸಿರುದ್ದೀನ್ ಸಿಂಹಾಸನದಿಂದ ಕೆಳಗಿಳಿದು ಹಸನನಿಗೆ ಎಡೆಮಾಡಿಕೊಟ್ಟ. ಹಸನ್ ಅಬುಲ್ ಮುಝಫರ್ ಅಲ್ಲಾವುದ್ದೀನ್ ಬಹಮನ್ ಷಾ ಎಂಬ ಹೆಸರನ್ನು ಸ್ವೀಕರಿಸಿ ೧೩೪೭ ರಲ್ಲಿ ರಾಜ್ಯಾಧಿಕಾರವನ್ನು ವಹಿಸಿಕೊಂಡ.

ಹನ್ನೊಂದು ವರ್ಷಗಳು ರಾಜ್ಯವಾಳಿದ ಬಹಮನ್ ಷಾ, ತೊಘಲಕ್ ಮನೆತನದ ಬಗ್ಗೆ ವಿಶ್ವಾಸ ತಳೆದಿದ್ದವರನ್ನು ನಿರ್ನಾಮಗೊಳಿಸಿ, ಕೃಷ್ಣಾ ನದಿಯುವರೆಗೆ ದಕ್ಷಿಣದಲ್ಲಿ, ತನ್ನ ರಾಜ್ಯವನ್ನು ವಿಸ್ತರಿಸಿದ. ಕಲ್ಬುರ್ಗಿಯನ್ನು ತನ್ನ ರಾಜಧಾನಿ ಮಾಡಿಕೊಂಡಿದ್ದ ಈ ದೊರೆ ಘನವಾದ ಕಟ್ಟಡಗಳನ್ನು ಕಟ್ಟಿಸಿ ಊರನ್ನು ಸಿಂಗರಿಸಿದ. ರಾಜ್ಯವನ್ನು ಕಲ್ಬುರ್ಗಿ, ದೌಲತಾಬಾದ್, ಬೀದರ್, ಬೀರಾರ್ ಜಿಲ್ಲೆಗಳಾಗಿ ವಿಭಾಗಿಸಿ, ಜಿಲ್ಲಾಧಿಕಾರಿಗಳನ್ನು ನೇಮಿಸಿದ. ಅವನ ತರುವಾಯ ಅವನ ಹಿರಿಯಮಗ ಮೊದಲನೆಯ ಮಹಮದ್ (೧೩೫೮ – ೭೭) ಪಟ್ಟಕ್ಕೆ ಬಂದ.

ರಾಜ್ಯದಾಹದಿಂದ ಪೀಡಿತನಾಗಿದ್ದ ಮಹಮದ್ ಇಡಿಯ ಹಿಂದೂಸ್ಥಾನವನ್ನೆಲ್ಲಾ ಆಕ್ರಮಿಸಿ, ಇಸ್ಲಾಮಿನ ರಕ್ತಧ್ವಜವನ್ನೇರಿಸಬೇಕೆಂದು ನಿರ್ಧರಿಸಿದ. ಐಗುಪ್ತದ ಖಲೀಫನೊಂದಿಗೆ ಸಖ್ಯ ಬೆಳೆಸಿ, ತಾನು ಅವನ ಸಾಮಂತನೆಂದು ಸಾರಿಕೊಂಡ.

ಉತ್ತರದ ಕಂಟಕ ಕಳೆಯಿತೆಂದು ವಿಜಯನಗರದಲ್ಲಿ ಬುಕ್ಕರಾಯರು ತೃಪ್ತರಾಗಿರುವಲ್ಲಿ ಮಹಮದನ ರಾಜ್ಯಲಾಲಸೆ ಅವರಿಗೆ ಚಿಂತೆಯನ್ನುಂಟು ಮಾಡಲಾರಂಭಿಸಿತು.

ಒಂದು ದಿನ ದೊರೆಗಳ ಮಂತ್ರಾಲೋಚನ ಸಭೆಯಲ್ಲಿ ಇದೇ ವಿಷಯ ಚರ್ಚೆಗೆ ಬಂದಿತು.

ಮುದ್ದಪ್ಪನಾಯಕರೆದ್ದು

"ಮಹಾಸ್ವಾಮಿ, ಬಹಮನಿ ಮನೆತನದ ಸ್ಥಾಪಕರಾದ ಬಹಮನ್ ಷಾ ಅವರಿಗೂ ಅವರ ಮಕ್ಕಳು ಮಹಮದರಿಗೂ ವಿಶೇಷ ವ್ಯತ್ಯಾಸವಿದೆ. ಬಹಮನ್ ಷಾ ಅವರು ಕಟು ಧರ್ಮಿಗಳಾಗಿರಲಿಲ್ಲ. ರಾಜ್ಯವಿಸ್ತರಣಾಕಾಂಕ್ಷೆ

ಅವರಿಗಿದ್ದರೂ ಹಿಂದುಗಳನ್ನು ದ್ವೇಷಿಸುತ್ತಿರಲಿಲ್ಲ. ಮಹಮುದ್‌ಷಹರು ಹಿಂದೂಧರ್ಮಕ್ಕೆ ಕಂಟಕಪ್ರಾಯರಾಗಿದ್ದಾರೆ. ಅವರು ಪ್ರಬಲಿಸುವ ಮುನ್ನವೇ ನಾವು ಸದೆಬಡೆಯದಿದ್ದರೆ ಆಲಸ್ಯಕ್ಕಾಗಿ ತಾವು ವಿಷಾದಿಸಬೇಕಾಗುತ್ತದೆ."

"ಈಗ ನಾವೇನು ಮಾಡಬೇಕು ಮುದ್ದಪ್ಪನಾಯಕರೇ"

"ಕಲ್ಬುರ್ಗಿಯನ್ನು ಮುತ್ತಿ ಅದನ್ನು ಕೈವಶಪಡಿಸಿಕೊಂಡು ಬಹಮನಿ ಮನೆತನ ತಲೆ ಎತ್ತದಂತೆ ಮಾಡಬೇಕು."

ಮುದ್ದಪ್ಪನಾಯಕರ ಸಲಹೆ ಕೇಳಿ ಸ್ಫೂರ್ತಿಗೊಂಡ ಡಣ್ಣಾಯಕ ನಾಡಗೊಂಟೆ ಮಲ್ಲಿನಾಥ ಎದ್ದುನಿಂತು

"ಮುದ್ದಪ್ಪನಾಯಕರ ಸಲಹೆ ಯೋಗ್ಯವಾಗಿದೆ. ಮಹಾಸ್ವಾಮಿಯವರು ಅಪ್ಪಣೆಯಿತ್ತರೆ ನಾನು ಕಲ್ಬುರ್ಗಿಯನ್ನು ಮುತ್ತಲು ಸಿದ್ಧನಾಗಿದ್ದೇನೆ." ಎಂದ.

ದೊರೆಗಳು ಚಿಂತಾಪರವಶರಾಗಿ,

"ಧರ್ಮಬಲದಿಂದ ನಾವು ಒಂದು ಸಾಮ್ರಾಜ್ಯ ಸ್ಥಾಪಿಸಲು ಹೊರಟಿದ್ದೇವಲ್ಲದೆ ಬಾಹುಬಲದಿಂದಲ್ಲ! ಇಂದು ನಮ್ಮ ಸೈನ್ಯಗಳನ್ನು ಕಲ್ಬುರ್ಗಿಯ ಮೇಲೆ ನಡೆಯಿಸಿ ಬಹಮನಿ ಮನೆತನವನ್ನು ನಾಮಾವಶೇಷಗೊಳಿಸುವುದು ದುಸ್ಸಾಧ್ಯವೆಂದು ನಾವು ಭಾವಿಸಿಲ್ಲ. ಆದರಿದು ಧರ್ಮವೇ ಎಂದು ನಾವು ಆಲೋಚಿಸಬೇಕು. ಮಹಮುದ್‌ಷಹರು ಇದುವರೆಗೆ ನಮ್ಮ ವಿಷಯದಲ್ಲಿ ಸೌಜನ್ಯದಿಂದ ನಡೆದುಕೊಂಡಿದ್ದಾರೆ. ಅವರ ತೀರ್ಥರೂಪರವರು ನಮ್ಮ ಸ್ನೇಹಿತರಾಗಿದ್ದರು. ನಿಷ್ಕಾರಣವಾಗಿ ನಾವು ಕಲ್ಬುರ್ಗಿಯ ಮೇಲೇರಿ ಹೋಗಿ ನೆತ್ತರಿನ ಹೊಳೆ ಹರಿಸುವುದಕ್ಕೆ ನನ್ನ ಮನಸ್ಸು ಒಡಂಬಡುತ್ತಿಲ್ಲ."

"ಕಲ್ಬುರ್ಗಿಯ ಮೇಲೇರಿ ಹೋಗುವುದಕ್ಕೆ ನಮಗೆ ಪ್ರಬಲ ಕಾರಣಗಳಿವೆ ಮಹಾಸ್ವಾಮಿ."

"ಕಾರಣಗಳೇನು ಹೇಳಿ."

"ಕಲ್ಬುರ್ಗಿಯ ಹಿಂದೂ ಅಕ್ಕಸಾಲಿಗರನ್ನು ಮಹಮುದ್‌ರು ಶೂಲಕ್ಕೇರಿಸಲಿಲ್ಲವೇ ?"

ದೊರೆಗಳು ಮಾರಪ್ಪನಾಯಕರ ಕಡೆ ತಿರುಗಿ

"ಈ ಅಕ್ಕಸಾಲಿಗರ ಪ್ರಕರಣದ ನಿಜಸ್ಥಿತಿಯೇನು ಮಾರಪ್ಪ ನಾಯಕರೆ?" ಎಂದರು.

ಮಾರಪ್ಪನಾಯಕರು ಮುದ್ದಪ್ಪನಾಯಕರ ಮುಖ ನೋಡಿ

"ಕಲ್ಬುರ್ಗಿ ಮತ್ತು ವಿಜಯನಗರದ ಅಕ್ಕಸಾಲಿಗರು ಬಹಮನಿ ರಾಜ್ಯದ ಚಿನ್ನದ ನಾಣ್ಯಗಳನ್ನು ಸಂಗ್ರಹಿಸಿ ಕರಗಿಸುತ್ತಿದ್ದರು. ಇದು ಬಹಮನಿ ರಾಜ್ಯದ ದೊರೆಗಳ ಗಮನಕ್ಕೆ ಬರಲು ಅವರು ಅಕ್ಕಸಾಲಿಗರ ಆಸ್ತಿ ಪಾಸ್ತಿಗಳ ಮುಟ್ಟುಗೋಲು ಹಾಕಿಕೊಂಡು, ಮುಖ್ಯಸ್ಥರನ್ನು ಮರಣದಂಡನೆಗೆ ಗುರಿಮಾಡಿದರು."

"ನಮ್ಮ ಪ್ರಜರನ್ನು ದಂಡಿಸಿದ ಕಾರಣವನ್ನೇ ಮುಂದುಮಾಡಿ ನಾವು ಕಲ್ಬುರ್ಗಿಯ ಮೇಲೆ ದಂಡೆತ್ತಿ ಹೋಗಬಹುದು."

ಎಂದು ಮುದ್ದಪ್ಪನಾಯಕರು ಸೂಚಿಸಿದರು.

ಬುಕ್ಕರಾಯರ ಸಂಶಯ ಪರಿಹಾರವಾಗಿರಲಿಲ್ಲ.

"ಬಹಮನಿ ರಾಜ್ಯದ ನಾಣ್ಯಗಳನ್ನು ಕರಗಿಸಿದುದಕ್ಕೆ ಅಕ್ಕಸಾಲಿಗರನ್ನು ದೊರೆಗಳೇಕೆ ದಂಡಿಸಬೇಕಾಗಿತ್ತು?"

"ನಮ್ಮ ನಾಣ್ಯಗಳು ಬಹಮನಿರಾಜ್ಯದ ಚಿನ್ನದ ನಾಣ್ಯಗಳಷ್ಟು ಶುದ್ಧ ವಾಗಿಲ್ಲ. ವಿನಿಮಯದ ಚಮತ್ಕಾರದಿಂದ ಅಕ್ಕಸಾಲಿಗರು ಹಣ ದೋಚು ತ್ತಿದ್ದಾರೆಂದು ಬಹಮನಿ ಅರಸರ ತಿಳುವಳಿಕೆಯಾಗಿರಬಹುದು."

"ಅವರ ತಿಳುವಳಿಕೆ ತಪ್ಪು ಎನ್ನಲಾಗುವುದಿಲ್ಲ, ನಮ್ಮ ಪ್ರಜೆಗಳು ಅಂತಹ ಅಕೃತ್ಯವನ್ನಾಚರಿಸುತ್ತಿದ್ದರೆ, ಅವರನ್ನು ನಮ್ಮ ಕೈವಶಮಾಡುವುದು ಮಹಮುದ್ ದೊರೆಗಳ ಕರ್ತವ್ಯವಾಗಿತ್ತು ಅವರು ಸ್ವಾತಂತ್ರ್ಯವಹಿಸಿ ನಮ್ಮ ಅಕ್ಕಸಾಲಿಗರನ್ನು ದಂಡಿಸುವುದು ಯೋಗ್ಯವಲ್ಲ."

"ನಮ್ಮ ನಾಣ್ಯಗಳು ನಿಜವಾಗಿಯೂ ಬಹಮನಿ ನಾಣ್ಯಗಳಷ್ಟು ಶುದ್ಧವಾಗಿಲ್ಲವೇ?"

"ಇಲ್ಲ ಮಹಾಪ್ರಭೂ."

"ನಮ್ಮ ಪ್ರಜರಿಗೆ ನಾವೇ ಮೋಸಮಾಡುತ್ತಿದ್ದೇವೆ."

"....................."

"ಈಗ ಚಲಾವಣೆಯಲ್ಲಿರುವ ಎಲ್ಲ ನಾಣ್ಯಗಳನ್ನೂ ಕೂಡಲೇ ಹಿಂದಕ್ಕೆ ತೆಗೆದುಕೊಂಡು, ಅವುಗಳ ಬದಲು ಶುದ್ಧ ನಾಣ್ಯಗಳನ್ನು ಚಲಾವಣೆಗೆ ತನ್ನಿ. ನಮ್ಮ ಸಾಮ್ರಾಜ್ಯದ ವ್ಯಾಪಾರ ಸಮುದ್ರದಾಚೆಗೂ ಪಸರಿಸಬೇಕೆಂದು ನಾವು

ಬಯಸುತ್ತಿರುವಾಗ ಅಶುದ್ಧ ನಾಣ್ಯಗಳ ಚಲಾವಣೆ ಮಹಾಪರಾಧವಾಗುತ್ತದೆ."

ಮುದ್ದಪ್ಪನಾಯಕರು ಮುದಗೊಂಡು

"ಇದೇ ವ್ಯಾಜದಿಂದಲೇ ನಾವು ಬಹಮನಿರಾಜ್ಯವನ್ನು ಮುತ್ತಬಹುದು."

"ದುಡುಕುವುದು ಒಳ್ಳೆಯದಲ್ಲ ಮುದ್ದಪ್ಪನಾಯಕರೇ. ನಮ್ಮ ರಾಜ್ಯದಲ್ಲಿ ಮಹತ್ವದ ನಿಯೋಜನೆಗಳನ್ನು ಹೂಡಿಕೊಂಡಿದ್ದೇವೆ. ರಾಜಮಾರ್ಗಗಳು, ನೀರಾವರಿ ಯೋಜನೆ, ನಾಲೆಗಳು ದೊಡ್ಡ ದೊಡ್ಡ ಕಟ್ಟಡಗಳ ಕೆಲಸ ಕೈಗೊಂಡಿದ್ದೇವೆ. ಈಗ ನಾವು ಯುದ್ಧಕ್ಕೆ ಮನಸೋತರೆ ಇವುಗಳೆಲ್ಲವನ್ನೂ ನಿಲ್ಲಿಸಬೇಕಾಗುತ್ತದೆ. ಈ ಬಾರಿಯ ಯುದ್ಧ ಬೇಗ ಮುಗಿಯುತ್ತದೆಂದು ನಾನು ನಂಬುವುದಿಲ್ಲ. ದೀರ್ಘಕಾಲ ದೇಶವನ್ನು ಯುದ್ಧೋದ್ಯುಕ್ತಮಾಡಿ, ಜನಹಿತಕ್ಕೆ ಅವಶ್ಯಕವಾದ ನಿಯೋಜನೆಗಳನ್ನು ನಿಲ್ಲಿಸಿಬಿಡುವುದು ವಿಹಿತವೇ ಎಂಬುದನ್ನು ಆಲೋಚಿಸಬೇಕು. ಶ್ರೀಗುರು ವಿದ್ಯಾರಣ್ಯರು ಕಾಶಿಯಿಂದ ಹಿಂದಿರುಗಿ ಬರುವವರೆಗೆ ನಾವು ಯಾವ ಇತ್ಯರ್ಥವನ್ನೂ ಕೈಗೊಳ್ಳಲು ಸಾಧ್ಯವಿಲ್ಲ."

"ಅಪ್ಪಣೆಯಾದರೆ ಶ್ರೀಗುರುಗಳನ್ನು ಕಾಶಿಯಿಂದ ಕರೆತರಲು ಉಚಿತ ಪರಿವಾರ ಕಳುಹಿಸಿಕೊಡುತ್ತೇನೆ. ಅವರು ಬಂದ ತರುವಾಯವೇ ಈ ವಿಷಯ ನಿರ್ಧರಿಸಬಹುದು."

ಎಂದು ಮುದ್ದಪ್ಪನಾಯಕರು ಅರಿಕೆ ಮಾಡಿಕೊಂಡರು. ದೊರೆಗಳು ಸಮ್ಮತಿಸಿ

"ಅಗ್ರಹಾರದ ನಿರ್ಮಾಣವೆಲ್ಲಿಗೆ ಬಂತು ? ಶ್ರೀಗುರುಗಳು ಬರುವ ವೇಳೆಗೆ ಅಗ್ರಹಾರ ಸಿದ್ಧವಾಗಿರಬೇಕೆಂಬುದೇ ನಮ್ಮ ಅಪೇಕ್ಷೆ."

"ಅಗ್ರಹಾರ ರಚನೆ ಮುಗಿದಂತಾಗಿದೆ. ಕಾಶ್ಮೀರದ ಮಹಾ ಪಂಡಿತ ತ್ರಿಲೋಚನ ಭಟ್ಟಾಚಾರ್ಯರೂ, ಆರ್ಯ ಕ್ಷೇಮೇಂದ್ರರೂ ಬರಲೊಪ್ಪಿ ಕಾಗದಗಳನ್ನು ಬರೆದಿದ್ದಾರೆ."

"ಸರ್ವದರ್ಶನ, ಕಾವ್ಯಗಳಲ್ಲಿ ನಿಷ್ಣಾತರಾದ ಪಂಡಿತರನ್ನು ಜತೆಯಲ್ಲಿ ಕರೆತರುವಂತೆ ತ್ರಿಲೋಚನ ಭಟ್ಟಾಚಾರ್ಯರಿಗೆ ಬರೆದಿರುವಿರಾ ?"

"ಬರೆದಿದ್ದೇನೆ. ಅವರು ಒಪ್ಪಿಗೆ ಸೂಚಿಸಿದ್ದಾರೆ."

ದೊರೆಗಳು ಸುಪ್ರೀತರಾಗಿ ಮೇಲಕ್ಕೆದ್ದರು.

ದೊರೆಗಳನ್ನೇ ಅನುಸರಿಸಿ ಮಾರಪ್ಪನಾಯಕರು ಅಂತಃಪುರ ಪ್ರವೇಶಿಸಿದರು.

ದೊರೆಗಳು ತಮ್ಮನನ್ನು ಆದರದಿಂದ ನೋಡಿ

" ಇಲ್ಲೇ ಊಟಮಾಡಬಹುದಲ್ಲ " ಎಂದರು.

ನಾಯಕರು ಸೌಜನ್ಯದಿಂದ

" ಒಂದು ಅರಿಕೆ ಮಾಡಿಕೊಳ್ಳುವುದಿತ್ತು ಬಂದೆ. ಊಟಕ್ಕೆ ಮನೆಗೇ ಹೋಗುತ್ತೇನೆ."

" ಹೇಳಿ."

" ಓರುಗಲ್ಲಿನ ಶ್ರೀ ಶ್ರೀ ವಿನಾಯಕದೇವರು ಛದ್ಮವೇಷಧಾರಿಗಳಾಗಿ ಬಂದಿದ್ದಾರೆ. ಮಹಾಸ್ವಾಮಿಯವರ ದರ್ಶನ ಪಡೆಯಲು ಆತುರರಾಗಿದ್ದಾರೆ."

" ಈಗವರು ಎಲ್ಲಿದ್ದಾರೆ."

" ನನ್ನ ಮನೆಯಲ್ಲಿ."

" ಯಾವಾಗ ಬಂದರು."

" ಇಂದೇ – ಸೂರ್ಯೋದಯಕ್ಕೆ ಮುನ್ನ."

ಬುಕ್ಕರಾಯರು ಕ್ಷಣಕಾಲ ಆಲೋಚಿಸಿ

" ಸಂಜೆಯಾದಮೇಲೆ ಅವರನ್ನು ' ಗಿರಿವನ 'ಕ್ಕೆ ಕರೆದುಕೊಂಡು ಬನ್ನಿ. ಅವರ, ನಮ್ಮ ಭೇಟಿ ಗೋಪ್ಯವಾಗಿರುವುದು ಒಳ್ಳೆಯದು – ಶ್ರೀ ಶ್ರೀ ಗುರುಗಳು ರಾಜಧಾನಿಯಲ್ಲಿಲ್ಲದಿರುವುದು ನಮ್ಮ ಕೈಮುರಿದಂತಾಗಿದೆ. ಅವರಿಗೆ ಕೂಡಲೆ ಪ್ರಾರ್ಥನಾಪತ್ರ ಕಳಿಸಿಕೊಡಿ."

" ಅಪ್ಪಣೆ."

ಎಂದು ಮಾರಪ್ಪನಾಯಕರು ದೊರೆಗಳಿಗೆ ಗೌರವ ಸಲ್ಲಿಸಿ ಗೃಹಾಭಿಮುಖರಾದರು.

೪

ಊರಿನ ಗೊಂದಲದಿಂದ ಸ್ವಲ್ಪದೂರದಲ್ಲಿದ್ದ 'ಗಿರಿವನ' ಅರಸರ ಪ್ರಿಯತಾಣವಾಗಿತ್ತು. ರಾಜಕಾರಣದ ಹೊರೆಯನ್ನು ಮರೆಯಲು ದೊರೆಗಳು ಗಿರಿವನ ಸೇರಿ, ಒಂದೆರಡು ಗಂಟೆಕಾಲ ವಿಶ್ರಮಿಸಿಕೊಳ್ಳುತ್ತಿದ್ದರು. ಮಂತ್ರಿಗಳು, ದಣ್ಣಾಯಕರು, ಸಾಮಂತರು, ಅರಸು ಮನೆತನದವರು ಕೂಡ ಅಂಥವೇಳೆಗಳಲ್ಲಿ 'ಗಿರಿವನ' ಕ್ಕೆ ಕಾಲಿಡಲು ಅಂಜುತ್ತಿದ್ದರು.

ಹೇಮಕೂಟದ ತಪ್ಪಲಿನಲ್ಲಿ ಗುಡ್ಡಗಳಿಂದಾವೃತವಾಗಿದ್ದ ಸಮಭೂಮಿಯನ್ನೇ 'ಗಿರಿವನ' ವನ್ನಾಗಿ ಮಾರ್ಪಡಿಸಲಾಗಿತ್ತು. ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲ ಪುಷ್ಪಗಳು, ಬಗೆಬಗೆಯ ವೃಕ್ಷಗಳು ಗಿರಿವನವನ್ನಲಂಕರಿಸಿದ್ದವು. ಜಿಂಕೆಯ ತಂಡ, ಗಿಳಿವಿಂಡು, ಸೋಗೆ ನವಿಲುಗಳು, ವಿವಿಧ ವರ್ಣಗಳ ಪುಟ್ಟಹಕ್ಕಿಗಳು, ಮೊಲಗಳು, ವನವನ್ನು ನಿಸರ್ಗದೇವತೆಯ ನಿಜಧಾಮವನ್ನಾಗಿಸಿದ್ದವು.

ಗಿರಿವನದಲ್ಲಿ ಬೀರಪ್ಪನಾಯಕನೇ ಸರ್ವಾಧಿಕಾರಿ. ಅವನ ಅಪ್ಪಣೆಯಿಲ್ಲದೆ ಯಾರೂ ಒಳಗೆ ಪ್ರವೇಶಿಸುವಂತಿರಲಿಲ್ಲ – ಹೂವು ಹರಿದವರ ಜೀವವನ್ನೇ ಬೀರಪ್ಪ ಹರಿದು ಬಿಡುತ್ತಿದ್ದ.

ಅರಸರು ತಮ್ಮ ಪ್ರೀತಿಯ ಹಕ್ಕಿ ಪಕ್ಷಿಗಳೊಂದಿಗೆ ವಿಹರಿಸುತ್ತಿದ್ದಂತೆ ಬೀರಪ್ಪ ಅವರಿಗೆ ಊರಿನ ಸುದ್ದಿಯನ್ನೆಲ್ಲಾ ಅರುಹುವನು. ರಾಜ್ಯಭಾರದ ಬಗ್ಗೆ ಸಾಮಾನ್ಯಜನರ ಅಭಿಪ್ರಾಯವನ್ನು ಅರಸರು ಬೀರಪ್ಪನ ಮೂಲಕ ಆಸಕ್ತಿಯಿಂದ ಅರಿಯುತ್ತಿದ್ದರು.

ಅರಸರು ತಮ್ಮ ಮುದ್ದಿನ ಮೊಲವೊಂದನ್ನೆತ್ತಿಕೊಂಡು ಅದರ ನೀಳ್ಗಿವಿಗಳನ್ನು ನೇವರಿಸುತ್ತಾ

"ಊರಿನ ಸುದ್ದಿಯೇನು ಬೀರಪ್ಪ" ಎಂದರು.

"ಮಹಾಸ್ವಾಮಿಯವರ ಚಿತ್ತಕ್ಕೆ ವೇದ್ಯವಾಗದಿರುವುದು ಯಾವುದು ?– ಬಹಮನಿ ಸುಲ್ತಾನರಿಂದ ನಮ್ಮ ಅಕ್ಕಸಾಲಿಗರಿಗಾದ ಅಪಮಾನ ಕಂಡು ಜನ ವ್ಯಗ್ರರಾಗಿದ್ದಾರೆ"

"ಮೋಸ ಶಿಕ್ಷಾರ್ಹವಾದುದಲ್ಲವೆ ?"

"ಶಿಕ್ಷೆ ವಿಧಿಸುವ ಹಕ್ಕು ತಮ್ಮದು ಮಹಾಪ್ರಭು. ವಿಜಯನಗರದ ಪ್ರಜರನ್ನು ದಂಡಿಸುವ ಹಕ್ಕು ಬಹಮನಿ ಸುಲ್ತಾನರಿಗಿಲ್ಲ. ಸುಲ್ತಾನರು ದುಡುಕಿ, ತಮ್ಮ ದರ್ಪಪ್ರದರ್ಶನಕ್ಕಾಗಿ ಈ ಅತ್ಯಾಚಾರ ನಡೆಸಿದ್ದಾರೆಂದು ಜನ ಅಭಿಪ್ರಾಯಪಡುತ್ತಿದ್ದಾರೆ."

"ವಿಜಯನಗರದರಸರು ಸತ್ಯಪ್ರಿಯರಾದರೂ ದುರ್ಬಲರಲ್ಲ ಎಂದು ಬಹಮನಿ ಸುಲ್ತಾನರು ತಿಳಿಯುವ ಕಾಲ ಸನ್ನಿಹಿತವಾಗುತ್ತಿದೆ ಬೀರಪ್ಪ. ತಾಳ್ಮೆಗೆಟ್ಟರೆ ಯುದ್ಧ ಅನಿವಾರ್ಯವಾಗುತ್ತದೆ. ಯುದ್ಧಕ್ಕೆ ನಾವು ಹೆದರುವುದಿಲ್ಲವಾದರೂ, ವಿನಾಕಾರಣ ಕಾಲು ಕೆರೆದುಕೊಂಡು ಜಗಳಕ್ಕೆ ನಿಲ್ಲುವುದು ಸಾಮ್ರಾಜ್ಯದ ಗೌರವಕ್ಕೆ ಸಲ್ಲದು. ಎಂದು ಸುಮ್ಮನಿದ್ದೇವೆ. – ಯುದ್ಧ ಸಂಭವಿಸಿದರೆ ಏನು ಮಾಡುವೆ ಬೀರಪ್ಪ ?"

ಎಪ್ಪತ್ತು ಸಂವತ್ಸರಗಳು ದಾಟಿದ್ದ ಬೀರಪ್ಪನ ನರನಾಡಿಗಳಲ್ಲಿ ವಿದ್ಯುತ್ಸಂಚಾರವಾದಂತಾಯಿತು. ಅಮೃತಸೇಚನೆಯಿಂದ ಶುಷ್ಕಕಾಷ್ಠ ಚಿಗುರೊಡೆದು ನಿಲ್ಲುವಂತೆ, ಅವನ ಜೀರ್ಣಕಾಯ ನವಜೀವನ ತಳೆದು ನಿಂತಿತು. ವೀರ ನಿರ್ಧಾರದಿಂದ ಬೀರಪ್ಪ

"ಯುದ್ಧ ಮಾಡುವೆವು ಪ್ರಭು" ಎಂದ.

"ನಿನ್ನ ಪ್ರೀತಿಯ ಗಿರಿವನ ರುದ್ರಭೂಮಿಯಾಗುವುದಲ್ಲಾ ಬೀರಪ್ಪ ?"

"ಗಿರವನವಿರುವೆಡೆ ಒಮ್ಮೆ ಬೆಂಗಾಡಾಗಿತ್ತು. ಪ್ರಭು ಕೃಪೆಯಿಂದ ಅದು ಇಂದು ನಂದನವನವಾಗಿದೆ. ದೇಶವೊಂದು ಉಳಿದರೆ ತಾವು ಕಣ್ಣು ಬಿಟ್ಟು ನೋಡಿದೆಡೆ ಗಿರಿವನ ಹುಟ್ಟಿಕೊಳ್ಳುತ್ತದೆ."

ಕ್ಷಣಕಾಲ ನೀರವವಾಗಿ ಕುಳಿತ ಬುಕ್ಕರಾಯರು

"ಇದೇ ನಮ್ಮ ಆಸ್ತಿ – ನಮ್ಮ ಸಾಮ್ರಾಜ್ಯದ ಸಂಪತ್ತು. ದೇಶವತ್ಸಲರಾದ ಪ್ರಜೆಗಳೇ ರಾಷ್ಟ್ರದ ಜೀವಜೀವಾಳ" ಎಂದರು.

ವನದ ಹೆಬ್ಬಾಗಿಲಿನಲ್ಲಿ ಯಾರೋ ಕಾಣಿಸಿಕೊಳ್ಳಲು ಅರಸರು

"ಮಾರಪ್ಪನಾಯಕರನ್ನು ನಿರೀಕ್ಷಿಸುತ್ತಿದ್ದೇವೆ. ಬಂದರೇನೋ ನೋಡು" ಎಂದರು.

ಮಾರಪ್ಪನಾಯಕರು, ಛದ್ಮವೇಷಧಾರಿಯಾಗಿದ್ದ ವ್ಯಕ್ತಿಯೊಂದಿಗೆ ಪ್ರವೇಶಿಸಿ ಪ್ರಭುಗಳಿಗೆ ಗೌರವ ಸಲ್ಲಿಸಿದರು. ಪ್ರಭುಗಳು ಎದ್ದು ನಿಂತು, ಛದ್ಮವೇಷಧಾರಿಯ ಕೈ ಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಂಡು

"ಓರುಗಲ್ಲಿನ ದೊರೆಗಳನ್ನು ಈ ರೀತಿ ಬರಮಾಡಿಕೊಳ್ಳುತ್ತಿರುವುದಕ್ಕಾಗಿ

ಮನಸ್ಸಿಗೆ ವಿಷಾದವಾಗಿದೆ” ಎಂದರು.

“ತಮ್ಮ ಆತಿಥ್ಯ, ಔದಾರ್ಯವನ್ನು ನಾನು ಹೊಸದಾಗಿ ಕಾಣ ಬೇಕಾಗಿದೆಯೇ?”

“ತಾವು ಮಾರುವೇಷದಿಂದ ಬರಬೇಕಾದ ಅಗತ್ಯವಿರಲಿಲ್ಲ.”

“ಬಹಮನಿರಾಜ್ಯದ ವಿದ್ಯಮಾನಗಳು ತಮಗೆ ತಿಳಿದಿರಬೇಕು. ಸುಲ್ತಾನ್ ಮಹಮದರು ಮಹತ್ವಾಕಾಂಕ್ಷಿಗಳು. ಇಡಿಯ ದಕ್ಷಿಣಾಪಥವನ್ನು ಕಬಳಿಸುವ ಹವಣಿಕೆಯಲ್ಲಿದ್ದಾರೆ. ಅವರ ಮೊದಲನೆಯ ಗ್ರಾಸ ಓರುಗಲ್ಲು – ನಾನು ತಮ್ಮಲ್ಲಿ ಸಹಾಯಭಿಕ್ಷೆ ಬೇಡಲು ಬಂದಿದ್ದೇನೆ.”

“ಸುಲ್ತಾನರು ಯುದ್ಧ ಸಿದ್ಧತೆಯಲ್ಲಿದ್ದಾರೆಯೇ?”

“ಪ್ರಬಲ ಸನ್ನಾಹದಲ್ಲಿದ್ದಾರೆಂದು ಗೂಢಚಾರರಿಂದ ನಮಗೆ ಸುದ್ದಿ ಬಂದಿದೆ. ಮಹಮದರು ಗಾದಿಗೆ ಬಂದ ದಿವಸದಿಂದ ಸಣ್ಣ ಪ್ರಮಾಣದಲ್ಲಿ ಯುದ್ಧ ಸಾಗುತ್ತಲೇ ಇದೆ. ಸುಲ್ತಾನರ ಜಿಲ್ಲಾಧಿಕಾರಿಗಳು ನಮ್ಮ ಗಡಿಗಳ ಮೇಲೆ ಧಾಳಿಮಾಡುತ್ತಲಿದ್ದಾರೆ. ಈಚೆಗೆ ನಡೆದ ಅಕ್ಕಸಾಲೆ ಪ್ರಕರಣ ಕೂಡ ನಮ್ಮನ್ನು ಕೆರಳಿಸುವ ಉದ್ದೇಶದಿಂದಲೇ ನಡೆದದ್ದು. ಮುಂದೆ ನಾವೇನು ಮಾಡಬೇಕೆಂದು ತಾವು ಸೂಚಿಸಬೇಕು.”

“ನಮ್ಮ ನೆರೆಹೊರೆಯ ರಾಜ್ಯಗಳ ಜತೆಗೆ ನಾವು ಯುದ್ಧಕ್ಕೆ ತೊಡಗಿದರೆ ದಿಲ್ಲಿ ಪಾದಶಾಹಿಯನ್ನು ಮುರಿಯಲಾಗುವುದಿಲ್ಲ. ಆದಷ್ಟು ಶಕ್ತಿ ಸಂಘಟನೆ ಮಾಡಿಕೊಂಡು, ಭಾರತವನ್ನು ಇಸ್ಲಾಮಿನ ಹಿಡಿತದಿಂದ ಪಾರುಮಾಡುವ ಒಂದು ಮಹಾಪ್ರಯತ್ನ ಕೈಗೊಳ್ಳಬೇಕಾಗಿದೆ. ಸದ್ಯಕ್ಕೆ ನಾನು ಯಾವ ನಿರ್ಧಾರವನ್ನೂ ಕೈಗೊಳ್ಳುವಂತಿಲ್ಲ – ಶ್ರೀಗುರು ವಿದ್ಯಾರಣ್ಯರು ಕಾಶಿಯಿಂದ ಹಿಂದಿರುಗಿದ ತರುವಾಯ ಮುಂದಿನ ಆಲೋಚನೆ ಮಾಡಬೇಕಾಗಿದೆ. ಯಾವದೋ ನೆಪಹೇಳಿ ನಾನು ನಿಮ್ಮನ್ನು ನಿರಾಶೆಗೊಳಿಸುತ್ತಿದ್ದೇನೆಂದು ಭಾವಿಸಬೇಡಿ. ವಿಜಯನಗರ ಯಾವಾಗಲೂ ನಿಮ್ಮ ಬೆನ್ನುಗಾವಲಿಗಿದೆ. ನೀವು ಸದ್ಯಕ್ಕೆ ಗಡಿರಕ್ಷಣೆಮಾಡಿಕೊಂಡು, ಸುಲ್ತಾನರೇ ಯುದ್ಧ ಘೋಷ ಮಾಡುವವರೆಗೆ ತಾಳ್ಮೆಯಿಂದಿರಬೇಕೆಂದು ನಮ್ಮ ಸಲಹೆ”

“ಆಗಬಹುದು.”

“ನಿಮ್ಮ ಸಿದ್ಧತೆ ಅವಿಶ್ರಾಂತವಾಗಿ ನಡೆದಿರಲಿ. ಸುಲ್ತಾನರ ಚಲನ ವಲನಗಳನ್ನು ನಮಗೆ ತಿಳಿಸುತ್ತಿರಿ.”

“ಅವಶ್ಯಕವಾಗಿ ಆಗಲಿ. ಅಪ್ಪಣೆಯಾದರೆ ನಾನು ಈ ರಾತ್ರಿಯೇ

ಪ್ರಯಾಣ ಬೆಳಸುತ್ತೇನೆ."

"ಮಾರಪ್ಪನಾಯಕರೇ, ಶ್ರೀ ವಿನಾಯಕ ದೇವರು ಪ್ರಯಾಣ ಸಿದ್ಧರಾಗಿದ್ದಾರೆ. ಯೋಗ್ಯ ಅಂಗರಕ್ಷಕರನ್ನು ನೇಮಿಸಿ ಅವರನ್ನು ಸುರಕ್ಷಿತ ವಾಗಿ ಓರುಗಲ್ಲು ಮುಟ್ಟಿಸುವುದು ನಿಮ್ಮ ಭಾರ."

"ಅಪ್ಪಣೆ"

ಮಾರಪ್ಪನಾಯಕರೂ, ಶ್ರೀ ವಿನಾಯಕದೇವರೂ ನಿಷ್ಕ್ರಮಿಸಿದಮೇಲೆ ಬುಕ್ಕರಾಯರು ಶ್ರೀ ಭುವನೇಶ್ವರಿಯನ್ನು ಧ್ಯಾನಿಸುತ್ತಾ ಕುಳಿತರು.

೫

ರಾಹುತರಿಬ್ಬರೂ ದಣಿದು ಅರಮನೆ ಮುಟ್ಟಲು ಕಾಪಿನ ಭಟರು, ಕುದುರೆಗಳ ಕಡಿವಾಣವನ್ನು ಹಿಡಿದುಕೊಂಡರು. ರಾಹುತರಿಬ್ಬರೂ ಕುದುರೆ ಗಳಿಂದ ಕೆಳಗಿಳಿದು, ಅವುಗಳನ್ನಪ್ಪಿ ಮುದ್ದಿಟ್ಟು ಅರಮನೆ ಪ್ರವೇಶಿಸಿದರು.

ಮುದ್ದಪ್ಪನಾಯಕರೂ, ಯುವರಾಜ ಇಮ್ಮಡಿ ಹರಿಹರ ಒಳಗೆ ಪ್ರವೇಶಿಸಲು ಅರಮನೆಯದಾಸಿಯರು ಮಣ್ಣಿನ ಹೊಸಮಡಿಕೆಗಳಲ್ಲಿ ಇಬ್ಬರಿಗೂ ನೊರೆ ಹಾಲು ತಂದಿತ್ತರು. ನಾಯಕರು, ಹರಿಹರ ಹಾಲುಕುಡಿದ ಮೇಲೆ ಬೆವರಿನಿಂದ ತೊಯ್ದು ಹೋಗಿದ್ದ ಅವರ ಬಟ್ಟೆಗಳನ್ನು ಸೇವಕರು ಕಳಚಿ, ಚೆನ್ನಾಗಿ ಮೈಯೊರೆಸಿದರು.

ಮುದ್ದಪ್ಪನಾಯಕರು ಯುವರಾಜರತ್ತ ತಿರುಗಿ

"ಆಯಾಸವಾಗಿದೆಯೇ ಅಪ್ಪಾಜಿ." ಎಂದರು.

"ಏಕೆ – ಚಿಕ್ಕಪ್ಪ."

"ಇವತ್ತಿನ ಸವಾರಿ ನಿಮ್ಮನ್ನು ಬಹಳ ಆಯಾಸಮಾಡಿರಬೇಕು."

"ನಿಮ್ಮ ಪಟ್ಟು ನನಗೆ ಹೇಳಿಕೊಡುವುದಿಲ್ಲವೇ ಚಿಕ್ಕಪ್ಪ."

ಮುದ್ದಪ್ಪನಾಯಕರು ಗಹಗಹಿಸಿ ನಕ್ಕು

"ನೀವಿನ್ನೂ ಚಿಕ್ಕವರು ಅಪ್ಪಾಜಿ. ನಾಲ್ಕುವರ್ಷಗಳು ತಡೆಯಿರಿ.

ಮಾಂಸಖಂಡಗಳು ಇನ್ನಷ್ಟು ಬೆಳೆಯಲಿ – ಪಟ್ಟು ತಾನಾಗಿಯೇ ನಿಮಗೆ ಪಾಠವಾಗುತ್ತದೆ."

ಎಂದು ಮೇಲಕ್ಕೆದ್ದು

"ಮಲ್ಲಶಾಲೆಗೆ ಹೋಗೋಣವೆ ?" ಎಂದರು.

ಯುವರಾಜರು ಮೇಲಕ್ಕೆದ್ದು

"ಸಿದ್ಧವಾಗಿದ್ದೇನೆ." ಎಂದರು.

ಯುವರಾಜರು, ಮುದ್ದಪ್ಪನಾಯಕರು ಮಲ್ಲಶಾಲೆ ಪ್ರವೇಶಿಸಲು ಕಣದನಾಯಕ ಗಂಗಾಜಟ್ಟಿ, ನೆಲಮುಟ್ಟಿ ಅವರಿಗೆ ನಮಸ್ಕರಿಸಿದ.

ಉಭಯವೀರರೂ ವಸ್ತ್ರಗಳನ್ನು ಕಳಚಿ, ತೋಳು ತೊಡೆಗಳನ್ನು ತಟ್ಟಿಕೊಂಡು ಕಣಕ್ಕೆ ಧುಮುಕಿದರು. ಮುದ್ದಪ್ಪನಾಯಕರು ಕಣದ ಕೆಂಪು ಮಣ್ಣನ್ನೆತ್ತಿಕೊಂಡು ಮೈ ಕೈಗಳಿಗೆ ಚೆನ್ನಾಗಿ ಲೇಪಿಸಿಕೊಂಡರು. ಗಂಗಾಜಟ್ಟಿ, ಮಣ್ಣನ್ನೆತ್ತಿಕೊಂಡು ಯುವರಾಜರ ಮೈಗೆ ಚೆನ್ನಾಗಿ ತಿಕ್ಕಿದ.

ಗಂಗಾಜಟ್ಟಿ ಯುವರಾಜರಿಗೆ ಒಂದೊಂದಾಗಿ ಪಟ್ಟುಗಳನ್ನು ಹೇಳಿಕೊಡುತ್ತಾ ಅವರಿಗೆ ಆಯಾಸವಾಗದಂತೆ ಅಭ್ಯಾಸಮಾಡಿಸುತ್ತಿದ್ದ. ಅದನ್ನು ನೋಡುತ್ತಿದ್ದ ಮುದ್ದಪ್ಪನಾಯಕರು ನಸುಗೋಪಗೊಂಡು

"ಗಂಗಾಜಟ್ಟಿ – ಇದೇನು ಮಲ್ಲಶಾಲೆಯೋ, ನೃತ್ಯಶಾಲೆಯೋ"

ಎಂದು ತೊಡೆತಟ್ಟಿ

"ಹೀಗೆ ಬನ್ನಿ ಅಪ್ಪಾಜಿ." ಎಂದರು.

ಯುವರಾಜ ಕುಮಾರರಿಗೂ, ಮುದ್ದಪ್ಪನಾಯಕರಿಗೂ ಸೆಣಸಾಟ ಆರಂಭವಾಯಿತು. ಮೂರುಬಾರಿ ನಾಯಕರು ಯುವರಾಜ ಕುಮಾರರ ಸೊಂಟ ಬಳಸಿ, ಒಂದೇ ಕೈಯಲ್ಲಿ ಮೇಲಕ್ಕೆತ್ತಿ ನೆಲದಮೇಲೆ ಕುಕ್ಕಿದರು.

ಜಿಂಕೆಯ ಮರಿಯಂತೆ ಮೇಲಕ್ಕೆ ಹಾರಿದ ಯುವರಾಜರು ಮುದ್ದಪ್ಪನಾಯಕರ ಎದೆಗೇ ಏರಿಹೋದರು. ಅವರನ್ನು ಹಾಗೆಯೇ ಎದೆಗಪ್ಪಿಕೊಂಡ ಮುದ್ದಪ್ಪ ನಾಯಕರು

"ಇದು ಬಹಳ ಅಪಾಯಕರವಾದ ಪಟ್ಟು ಅಪ್ಪಾಜಿ. ಎದುರಾಳಿ ಬಲಿಷ್ಠನಾಗಿದ್ದರೆ ಒಂದೇ ಪಟ್ಟಿಗೆ ನಿಮ್ಮನ್ನು ಕೆಡವುತ್ತಾನೆ—ನೀವು ಕುಳಿತುಕೊಂಡು ನೋಡಿ. ನಾನು ಗಂಗಾಜಟ್ಟಿ ಸೆಣಸುತ್ತೇನೆ."

ಗಂಗಾಜಟ್ಟಿ, ಮುದ್ದಪ್ಪನಾಯಕರ ಮಲ್ಲಯುದ್ಧವನ್ನು ಯುವರಾಜ ಕುಮಾರರು ಕಣ್ಣೆವೆ ಹಾಕದೆ ನೋಡಲಾರಂಭಿಸಿದರು. ಇಬ್ಬರೂ ಸಮಾನ

ಬಲದ, ಸಮಾನ ಕೌಶಲ್ಯದ ಯೋಧರು. ಪಟ್ಟಿಗೆ ಪಟ್ಟು; ಹೊಡೆತಕ್ಕೆ ಹೊಡೆತ; ತಿರುವಿಗೆ ತಿರುವು.

ಪಟ್ಟುಗಳನ್ನು ವಿವರಿಸುತ್ತಾ ಮುದ್ದಪ್ಪನಾಯಕರು ಹೋರಾಡುತ್ತಿದ್ದುದನ್ನು ಕಂಡು ವಿಸ್ಮಯಗೊಂಡಿದ್ದ ಯುವರಾಜರು, ಇಬ್ಬರೂ ಮಣ್ಣು ಮುಟ್ಟಿ ನಮಸ್ಕರಿಸಿ, ಪರಸ್ಪರ ಹಸ್ತಲಾಘವ ಕೊಟ್ಟುಕೊಂಡಮೇಲೆ

"ಚಿಕ್ಕಪ್ಪಾಜಿ, ನೀವಿಬ್ಬರೂ ನಿಜವಾಗಿ ಸೆಣಸಿದರೆ ಗೆಲ್ಲುತ್ತಿದ್ದವರು ಯಾರು ?" ಎಂದು ಕೇಳಿದರು.

ಗಂಗಾಜಟ್ಟಿ ಮೌನತಳೆದ.

ಮುದ್ದಪ್ಪನಾಯಕರು ಕಣದ ಕೆಮ್ಮಣ್ಣನ್ನು ಮೈಗೆ ಉಜ್ಜಿಕೊಳ್ಳುತ್ತಾ "ಗಂಗಾಜಟ್ಟಿ" ಎಂದರು.

"ಇಲ್ಲ ನನ್ನೊಡೆಯಾ – ಕಣದ ಗೌರವಕ್ಕಾಗಿ ದಣ್ಣಾಯಕರು ಹಾಗೆ ಅಪ್ಪಣೆಕೊಡಿಸುತ್ತಿದ್ದಾರೆ. ಈ ಸಿಂಹದ ಮುಂದೆ ನಾನೆಷ್ಟರವನು. ದಣ್ಣಾಯಕರನ್ನು ಬೀಳಿಸುವುದು ಮಹಾಸ್ವಾಮಿಯವರೊಬ್ಬರಿಗೇ ಸಾಧ್ಯ. ನನ್ನಂಥ ಹತ್ತು ಜಟ್ಟಿಗಳನ್ನು ದಣ್ಣಾಯಕರು ಲೀಲಾಜಾಲವಾಗಿ ಎತ್ತಿ ಒಗೆದು ಬಿಡುತ್ತಾರೆ."

"ನಿನ್ನ ಮಾತು ನಿಜ ಗಂಗಣ್ಣ – ಇವತ್ತೇನಾಯಿತು ಬಲ್ಲೆಯಾ ?"

"ಏನಾಯಿತು ದೊರೆ."

"ನಾನೂ ಚಿಕ್ಕಪ್ಪಾಜಿ ಸವಾರಿ ಮುಗಿಸಿಕೊಂಡು ಹಿಂದಿರುಗುತ್ತಿದ್ದೆವು. ಗಿರಿವನದ ಸ್ವಲ್ಪ ದೂರದಲ್ಲಿರುವ ಮಾವಿನತೋಪು ಪ್ರವೇಶಿಸಿದ ಕೂಡಲೆ ಚಿಕ್ಕಪ್ಪಾಜಿಯವರು 'ನಾನು ಮೊದಲು ಹೋಗುತ್ತೇನೆ – ನೀನು ಹಿಂಬಾಲಿಸಿ ಬಾ' ಎಂದರು. ಅವರು ಕುದುರೆ ದೌಡಾಯಿಸಲು ನಾನು ಮೆಲ್ಲನೆ ಅವರನ್ನೇ ಅನುಸರಿಸಿದೆ. ಒಂದು ಮಾವಿನ ಮರದ ಟೊಂಗೆ, ಮುಂದೆ ಹಾದಿತ್ತು. ಚಿಕ್ಕಪ್ಪಾಜಿ 'ನೋಡು ಅಪ್ಪಾಜಿ' ಎಂದು ಸಿಂಹನಾದಮಾಡಿ, ಎರಡು ಕೈಗಳಿಂದಲೂ ಟೊಂಗೆಯನ್ನಪ್ಪಿಕೊಂಡು, ತಮ್ಮ ತೊಡೆಗಳನ್ನು ಕುದುರೆಯ ಪಕ್ಕೆಗೆ ಕೊಟ್ಟು, ಅದನ್ನು ಮೊಂಡಿಗಳ ಹಿಡಿತದಲ್ಲಿಯೇ ಮೇಲಕ್ಕೆತ್ತಿಬಿಟ್ಟರು. ಆ ದೃಶ್ಯನೋಡಿ ನನಗಾದ ಆನಂದವನ್ನು ಹೇಗೆ ವರ್ಣಿಸಲಿ."

ಗಂಗಾಜಟ್ಟಿಯ ಕಣ್ಣುಗಳಿಂದ ಆನಂದಬಾಷ್ಪಗಳುದುರಿದವು.

"ಮಾತಾಯಿಯ ಆಶೀರ್ವಾದ – ನೀವೂ ಹಾಗೇ ಆಗಬೇಕು ದೊರೆ." ಎಂದ.

ಅರಮನೆಯ ಸೇವಕರು ನಾಯಕರಿಗೂ, ಯುವರಾಜರಿಗೂ ಅವರವರ ವಸ್ತ್ರಗಳನ್ನು ತಂದು ತೊಡಿಸಿದರು.

ನಾಯಕರು ಯುವರಾಜರೊಂದಿಗೆ ಹೊರಬಾಗಿಲನವರೆಗೆ ಬಂದು

"ಹೋಗಿ ಬರುವಿರಾ ಅಪ್ಪಾಜಿ" ಎಂದರು.

ಯುವರಾಜ ಕುಮಾರರು ಚಿಕ್ಕಪ್ಪನಿಗೆ ಮಣಿದು, ಕುದುರೆಯೇರಿ ಕುಳಿತು

"ಬೆಳಿಗ್ಗೆ ಬಂದುಬಿಡುತ್ತೇನೆ ಚಿಕ್ಕಪ್ಪಾಜಿ"

ಎಂದು ಕುದುರೆಯನ್ನು ಮುನ್ನಡೆಸಿದರು.

ಯುವರಾಜ ಕುಮಾರರು ಕಣ್ಮರೆಯಾಗುವವರೆಗೂ ನೋಡುತ್ತ ನಿಂತಿದ್ದ ನಾಯಕರು, ಗಂಗಾಜಟ್ಟಿಯ ಕಡೆ ತಿರುಗಿ

"ಇದೇ ನಮ್ಮ ರಾಜ್ಯದ ಬೆಳಕು ಗಂಗಾಜಟ್ಟಿ. ಶೌರ್ಯ ಪ್ರತಾಪದಲ್ಲಿ ಮಹಾಸ್ವಾಮಿಯವರನ್ನು ಯುವರಾಜರು ಮೀರಿಸುವಂತಾಗಬೇಕು."

"ಅಪ್ಪಣೆ ಪ್ರಭೂ"

ಎಂದು ಗಂಗಾಜಟ್ಟಿ ವಿನಮ್ರನಾಗಿ ನುಡಿದ.

## ೭

ಪುರಜನರೆಲ್ಲಾ ಶ್ರೀಗುರುಗಳ ಸ್ವಾಗತಕ್ಕೆ ಸಿದ್ಧತೆಮಾಡಲಾರಂಭಿಸಿದರು. ರಸ್ತೆಗಳು ಶುಚಿಯಾದವು. ಪ್ರತಿಯೊಂದು ಮನೆಯೂ ಮಾವಿನ ತೋರಣದಿಂದ ಅಲಂಕೃತವಾಯಿತು. ಎಲ್ಲ ಕೇರಿಯವರೂ ಪರಸ್ಪರ ಸ್ಪರ್ಧೆಯಿಂದ ಚಪ್ಪರಗಳನ್ನು ಹಾಕಿ, ಹೂಬಳ್ಳಿಗಳಿಂದ ಅಲಂಕರಿಸಿದರು.

ಊರಿನ ಹೆಬ್ಬಾಗಿಲಿನಲ್ಲಿ ದೊರೆಗಳು, ರಾಣಿ, ರಾಜಕುಮಾರ, ರಾಜಪರಿವಾರ ಸಮಸ್ತ ರಾಜಮರ್ಯಾದೆಯೊಂದಿಗೆ ಕಾಯಲಾರಂಭಿಸಿದರು.

ಕೊಂಬು ಕಹಳೆಗಳ ಧ್ವನಿಯಾಯಿತು.

ಗುರುದೇವರು ಕುಳಿತಿದ್ದ ಮೇನೆಯನ್ನು ಹೊತ್ತಿದ್ದ ಬೋಯಿಗಳು ಧಾವಿಸಿ ಬಂದು ಮೇನೆಯನ್ನಿಳುಹಿದರು.

ಶ್ರೀಗುರು ವಿದ್ಯಾರಣ್ಯರು, ಶಿಷ್ಯ ಶ್ರೀಕಂಠ ಮೇನೆಯಿಂದಿಳಿಯಲು ದೊರೆಗಳು, ರಾಣಿ ಅವರ ಪಾದಗಳನ್ನು ಶುದ್ಧೋದಕದಿಂದ ತೊಳೆದು, ಅರಶಿನ, ಕುಂಕುಮ, ಹೂ, ಪತ್ರಗಳಿಂದ ಅರ್ಚಿಸಿದರು. ರಾಣೀವಾಸದವರು ಗುರುಗಳಿಗೆ ಮುತ್ತಿನಾರತಿ ಬೆಳಗಿದರು.

ಶ್ವೇತಾಶ್ವಗಳಿಂದಲಂಕೃತವಾಗಿದ್ದ ಮಹಾರಥದಲ್ಲಿ ಶ್ರೀಗುರುಗಳು, ದೊರೆಗಳು ಮೆರವಣಿಗೆ ಹೊರಟರು. ದಾರಿಯುದ್ದಕ್ಕೂ ಜನ ಹುರುಪಿನಿಂದ ಗುರ್ವಾರ್ಚನೆ ಮಾಡಿದರು.

ಮೆರವಣಿಗೆ ಅರಮನೆ ಮುಟ್ಟಲು ದೊರೆಗಳು, ಶ್ರೀಗುರುಗಳು ಪರಿವಾರದ ಅಪ್ಪಣೆ ಪಡೆದು ಬೇರೊಂದು ರಥದಲ್ಲಿ ‘ ಗಿರಿವನ ’ದ ಕಡೆಗೆ ನಡೆದರು.

‘ ಗಿರಿವನ ’ದ ಶೋಭೆಯನ್ನು ಪರಾಮರ್ಶಿಸಿ ಆನಂದತುಂದಿಲರಾದ ಶ್ರೀಗುರುಗಳು,

“ ಗಿರಿವನ ನಿಜಕ್ಕೂ ಗಿರಿವನವಾಗಿದೆ. ಗಿರಿರಾಜನಂದಿನಿಯ ವಾಸಕ್ಕೆ ಯೋಗ್ಯಸ್ಥಾನ ಏರ್ಪಡಿಸಿರುವಿರಿ.” ಎಂದರು.

“ ವನವನ್ನು ತಾವು ಒಪ್ಪಿಸಿಕೊಂಡಲ್ಲಿ ನಾನು ಧನ್ಯನಾಗುತ್ತೇನೆ.”

“ ನನಗಾಗಿ ಈ ವನ ನಿರ್ಮಾಣವಾಯಿತೇ ?”

“ ರಾಷ್ಟ್ರಗುರುಗಳು ಅರಮನೆ ನಿರಾಕರಿಸಿದರು – ಸ್ಥಾನೋಚಿತವಾದ ಮರ್ಯಾದೆಗಳನ್ನು ಒಲ್ಲೆನೆಂದರು. ಗಿರಿವನವಾದರೂ ತಮ್ಮ ಮನಸ್ಸಿಗೆ ನೆಮ್ಮದಿಯನ್ನುಂಟುಮಾಡಲೆಂದು........”

“ ಬಹಳ ಸಂತೋಷ. ನಮ್ಮ ‘ ಗೀರ್ವಾಣ ವಿದ್ಯಾಪೀಠ ’ ಎಲ್ಲಿಗೆ ಬಂತು ?”

“ ಅಗ್ರಹಾರ ಸಿದ್ಧವಾಗಿದೆ. ಕಾಶ್ಮೀರದ ಪಂಡಿತರು ತ್ರಿಲೋಚನ ಭಟ್ಟಾಚಾರ್ಯರು, ಕ್ಷೇಮೇಂದ್ರರು ಇತರ ಪಂಡಿತರೊಂದಿಗೆ ಬರಲೊಪ್ಪಿದ್ದಾರೆ. ಅವರ ಆಗಮನವನ್ನೇ ನಿರೀಕ್ಷಿಸುತ್ತಿದ್ದೇವೆ.”

ಶ್ರೀಗುರುಗಳು ಸುಪ್ರಸನ್ನರಾಗಿ

“ ಕಾಶಿಯಲ್ಲಿದ್ದರೂ ನನಗೆ ಹಂಪೆಯ ಚಿಂತೆಯೇ ಆಗಿತ್ತು.”

“ ಯಾತ್ರೆ ಯಶಸ್ವಿಯಾಗಿ ಆಯಿತೇ ?”

"ಆಯಿತು – ಆದರೆ ಮನಸ್ಸಿಗೆ ನೆಮ್ಮದಿಯಿಲ್ಲ ಪ್ರಭೂ........"

"ಏಕೆ ಗುರುದೇವಾ ?"

"ಶ್ರೀ ವಿಶ್ವೇಶ್ವರ ಕಾಶಿಯಲ್ಲಿ ಬಂದಿಯಾಗಿದ್ದಾನೆ. ಊರಿನ ಪಂಡರು ಅವನ ಹೆಸರಿನಲ್ಲಿ ವ್ಯಾಪಾರಮಾಡುತ್ತಿದ್ದಾರೆ. ನನ್ನ ಸ್ವಾಮಿಯ ಮಹಾಮನೆ ಮಾರುಕಟ್ಟೆಯಾಗಿದೆ. ಶ್ರೀಕ್ಷೇತ್ರ ಅನ್ಯಾಯ, ಅತ್ಯಾಚಾರ, ದುರಾಚಾರಗಳ ಕೌರೂರಾಗಿದೆ. ಭಗವದ್ಪ್ರಸಾದವನ್ನು, ಗಂಗಾಜಲವನ್ನು ಜನ ಮಾರು ತ್ತಾರೆ. ಆರ್ಯಧರ್ಮ ಅನಾರ್ಯರ ಕೈಗೆ ಸಿಕ್ಕು ನರಳುತ್ತಿರುವುದನ್ನು ನಾವು ಕಾಶಿಯಲ್ಲಿ ಕಾಣಬಹುದು. ಮುಸ್ಲಿಮರ ಧಾಳಿಗೆ ಉತ್ತರದ ಹಿಂದೂ ರಾಜ್ಯಗಳು ಸುಲಭವಾಗಿ ವಶವಾಗುವುದಕ್ಕೆ ಈ ಧರ್ಮಕ್ಷಯವೇ ಮೂಲ ಕಾರಣ. ಹಿಂದೂಧರ್ಮ ಕಾಶಿಯಲ್ಲಿ ಪ್ರಾಣಶಕ್ತಿಯನ್ನು ನೀಗಿಕೊಂಡ ಎಲುಬಿನ ಹಂದರವಾಗಿದೆ. ಅದು ಇಲ್ಲಿ-ಹಂಪೆಯಲ್ಲಿ ಊರ್ಜಿತವಾಗಬೇಕು."

"ಧರ್ಮರಕ್ಷಣೆಯ ಬಗ್ಗೆ ನಾವು ಸದಾ ಜಾಗರೂಕರಾಗಿರುತ್ತೇವೆ."

"ಧರ್ಮಾಚರಣೆಯೇ ಧರ್ಮರಕ್ಷಣೆಯ ರಾಜಮಾರ್ಗ ಬುಕ್ಕರಾಯರೇ. ಉಪದೇಶ, ಪ್ರಸಾರಗಳಿಂದಾಗಲಿ, ಸೈನ್ಯ ಬಲದಿಂದಾಗಲಿ ಧರ್ಮರಕ್ಷಣೆ ಮಾಡಲು ಸಾಧ್ಯವಿಲ್ಲ. ಧರ್ಮ ರಾಷ್ಟ್ರದ ಮೈಗೂಡಬೇಕು. ವ್ಯಕ್ತಿಯ ಬಾಳಿನ ಉಸಿರಾಗಬೇಕು."

"ಬಹಮನಿಯ ಸುಲ್ತಾನ ಮಹಮುದರು ಯುದ್ಧಸಿದ್ಧತೆಯಲ್ಲಿದ್ದಾರೆಂದೂ, ವಿಜಯನಗರವನ್ನು ಮುತ್ತುವ ಯೋಚನೆ ಮಾಡುತ್ತಿದ್ದಾರೆಂದು ನಮಗೆ ಬೇಹುಗಾರರಿಂದ ಸುದ್ದಿ ಬಂದಿದೆ."

"ಬಹಮನಿ ಸುಲ್ತಾನರು ನಮ್ಮ ಮಿತ್ರರಾಗಿದ್ದರಲ್ಲಾ !"

"ಸುಲ್ತಾನ ಮಹಮುದರಿಗೂ ಅವರಿಗೆ ತೀರ್ಥರೂಪರಾದ ಸುಲ್ತಾನ ಹಸನರಿಗೂ ಬಹಳ ವ್ಯತ್ಯಾಸವಿದೆ ಗುರುದೇವ ! ಹಸನ್ ಸುಲ್ತಾನರು ರಾಜ್ಯ ಲೋಭಿಗಳಾಗಿರಲಿಲ್ಲ – ಧರ್ಮಾಂಧರಾಗಿರಲಿಲ್ಲ. ಮಹಮುದ್ ಸುಲ್ತಾನರು ತೊಘಲಕ ಬಾದಶಹರ ಮೇಲ್ಪಂಕ್ತಿಯನ್ನನುಸರಿಸುವಂತಿದೆ. 'ತೊಘಲಕ ಮಹಮುದರು ಸಾಧಿಸದಿದ್ದುದನ್ನು ನಾವು ಸಾಧಿಸುತ್ತೇವೆ. ಇಡಿಯ ಹಿಂದೂ ಸ್ಥಾನದ ಮೇಲೆ ಇಸ್ಲಾಮಿನ ಅರ್ಧಚಂದ್ರ ಬಾವುಟ ಒಂದೇ ಹಾರಾಡಬೇಕು' ಎಂದು ಜಂಭ ಕೊಚ್ಚಿಕೊಳ್ಳುತ್ತಿರುವರಂತೆ !"

"ಗೀತಾಚಾರ್ಯ ನಮಗೆ ದಾರಿ ತೋರಿಯೇ ಇದ್ದಾನೆ ಬುಕ್ಕ ರಾಯರೇ. ಮೈತ್ರಿ ಆಶಿಸುವವರಿಗೆ ಮೈತ್ರಿ ; ಯುದ್ಧ ಆಶಿಸುವವರಿಗೆ

ಯುದ್ಧ. ನಮ್ಮ ರಾಹುತರು, ಅಶ್ವಪಡೆ, ಗಜಪಡೆಗಳೆಲ್ಲಾ ಸಿದ್ಧವಾಗಿರಲಿ. ಬಹಮನಿ ಸುಲ್ತಾನರಿಗೆ ನಾವು ಯೋಗ್ಯ ಸ್ವಾಗತ ನೀಡಲಿಲ್ಲವಲ್ಲ ಎಂಬ ಅಪರಾಧಕ್ಕೆ ಗುರಿಯಾಗಬಾರದು."

"ಮಂತ್ರಿಮಂಡಲದ ಎಲ್ಲರ ಅಭಿಪ್ರಾಯವೂ ಇದೇ ಆಗಿದೆ ಗುರುದೇವ. ತಮ್ಮ ಒಪ್ಪಿಗೆ ದೊರಕಿಸಿಕೊಳ್ಳದೆ ಮುಂದಡಿಯಿಡುವುದಕ್ಕೆ ಯಾರಿಗೂ ಮನಸ್ಸಿಲ್ಲ."

"ಯುವರಾಜ ಕುಮಾರರ ಶಿಕ್ಷಣ ನಿರ್ವಿಘ್ನವಾಗಿ ಸಾಗಿದೆಯೇ?"

"ಸಾಗಿದೆ – ಅವರ ಚಿಕ್ಕಪ್ಪ ಮುದ್ದಪ್ಪನಾಯಕರೇ ಆ ಜವಾಬುದಾರಿ ಹೊತ್ತುಕೊಂಡಿದ್ದಾರೆ."

"ಯುದ್ಧ ಸಂಭವಿಸಿದರೆ ಯುವರಾಜ ಕುಮಾರರು ಕಾಳಗದ ಕಣಕ್ಕಿಳಿಯಲಿ."

"ಗುರುದೇವಾ..............."

"ಏನು ಬುಕ್ಕರಾಯರೇ?"

"ಅರಮನೆಯ ಸುಖಜೀವನದಲ್ಲಿ ಯುವರಾಜ ಕುಮಾರರು ಬೆಳೆದು ಕೇವಲ ವಿಲಾಸಿಗಳಾಗಿರಬೇಕೆಂದು ನನ್ನ ಅಪೇಕ್ಷೆಯಲ್ಲ. ಆದರೆ ಅವರನ್ನು ಈಗಲೇ ಯುದ್ಧರಂಗಕ್ಕೆ ಕಳಿಸುವುದು ಉಚಿತವೇ? ಗೌರಾಂಬಿಕೆ ಏನನ್ನುವಳೋ?"

ಶ್ರೀ ಗುರುದೇವರ ಮುಖ ಗಭೀರವಾಗಿ ಮ್ಲಾನಗೊಂಡಿತು. ಅವರ ಬದ್ಧಭ್ರುಕುಟಿಯ ಮೇಲೆ ಗೆರೆಗಳು ಮೂಡಿದವು. ಧ್ವನಿ ಗದ್ಗದಗೊಂಡಿತು. ಕ್ಷಣಕಾಲ ಮೌನ ತಳೆದ ಗುರುದೇವರು

"ನಮ್ಮ ಇಚ್ಛೆಗೆ ವಿರುದ್ಧವಾಗಿ ಗೌರಾಂಬಿಕೆ ವರ್ತಿಸುವುದಿಲ್ಲ. ಯುವರಾಜ ಕುಮಾರರು ಯುದ್ಧರಂಗಕ್ಕೆ ಹೋಗಬೇಕಾದುದು ಅನಿವಾರ್ಯ. ಇದನ್ನು ಯಥೋಚಿತವಾಗಿ ಮಹಾರಾಣಿಯವರಿಗೆ ನೀವು ತಿಳಿಸಿ."

ಎಂದು ಹೇಳಿದವರೇ ಕಣ್ಮುಚ್ಚಿ ಧ್ಯಾನಾಸಕ್ತರಾದರು.

ಸ್ವಲ್ಪಹೊತ್ತು ಗುರುದೇವರನ್ನು ದಿಟ್ಟಿಸಿ ನೋಡುತ್ತ ನಿಂತಿದ್ದ ಬುಕ್ಕರಾಯರು, ಅವರಿಗೆ ಅಭಿವಂದಿಸಿ, ಅಲ್ಲಿಂದ ಹೊರಹೊರಟರು.

೭

ಅದೇ ರಾತ್ರಿ ಅರಮನೆಯ ಮಂತ್ರಾಲೋಚನ ಮಂದಿರದಲ್ಲಿ
ುಕ್ಕರಾಯರ ನೇತೃತ್ವದಲ್ಲಿ ಸಭೆ ಸೇರಿತು.

ಮಾರಪ್ಪನಾಯಕರು ಪ್ರಕೃತಸ್ಥಿತಿಯನ್ನು ವಿಮರ್ಶಿಸಿ, ಸುಲ್ತಾನ
ುಹಮದರ ಕುಟಿಲ ನೀತಿಯನ್ನು ಸವಿಸ್ತಾರವಾಗಿ ನಿರೂಪಿಸಿದರು.

ರಣಹೇಡಿಯನ್ನು ವೀರನನ್ನಾಗಿಸುವ ಓಜದಿಂದ ಮಾರಪ್ಪನಾಯಕರು
ುಡಿದಮೇಲೆ ಸಭಾಸದರ ಮನಸ್ಸಿನಲ್ಲಿ ಅನುಮಾನ ಉಳಿಯಲು ಸಾಧ್ಯವೇ
ಇರಲಿಲ್ಲ. ಬಹಮನಿರಾಜ್ಯದ ಬಗ್ಗೆ ಸ್ಪಷ್ಟ ಧೋರಣೆ ತಳೆದೇ ಬಂದಿದ್ದ
ಅವರಿಗೆ ಮಾರಪ್ಪನಾಯಕರ ಪ್ರೇರಣೆಯೂ ಬೇಕಿರಲಿಲ್ಲ.

ನಾಲ್ಕಾರು ಜನ ಮಾರಪ್ಪನಾಯಕರ ವಾದವನ್ನು ಸಮರ್ಥಿಸಿದಮೇಲೆ
ುುದ್ದಪ್ಪನಾಯಕರೆದ್ದು.

"ಓರುಗಲ್ಲಿನ ವಿನಾಯಕದೇವರು ಪೂರ್ಣ ಬೆಂಬಲ ಕೊಡಲು
ುದ್ಧರಿದ್ದಾರೆ. ಸದ್ಯಕ್ಕೆ ಬಹಮನಿಯವರ ಕುತ್ತು ನಮಗೆ ಪ್ರಬಲವಾಗಿರ
ುದ್ದರೂ, ಓರುಗಲ್ಲಿನ ಆಸ್ತಿತ್ವ ತೂಗುಯ್ಯಾಲೆಯಂತೆ ಆಡುತ್ತಿದೆ ವಿಜಯ
ನಗರದ ಭವಿಷ್ಯತ್ತಿನ ದೃಷ್ಟಿಯಿಂದ ಹಾಗೂ ಓರುಗಲ್ಲಿನ ದೊರೆಗಳಿಗೆ
ಾವಿತ್ತಿರುವ ಆಶ್ವಾಸನ ದೃಷ್ಟಿಯಿಂದ ನಾವು ಬಹಮನಿರಾಜ್ಯವನ್ನು ಕೈವಶ
ಾಡಿಸಿಕೊಳ್ಳಬೇಕು."

ಹಿರಿಯ ದಣ್ಣಾಯಕ ಮಲ್ಲಿನಾಥರೆದ್ದು

"ಈ ಸಂಗ್ರಾಮದ ಬಗ್ಗೆ ತಾವು ಕಿಂಚತ್ತೂ ಯೋಚಿಸಬೇಕಾದುದಿಲ್ಲ
ುಹಾಪ್ರಭೂ. ತಾವು ಅನುಮತಿಯಿತ್ತರೆ ಸಾಕು, ನಾನೇ ಸೈನ್ಯ
ಸಮೇತನಾಗಿ ಹೋಗಿ ಮಹಮದ್ ಸುಲ್ತಾನರನ್ನು ಸೆರೆಹಿಡಿದು ತಂದು
ಾದಕ್ಕೊಪ್ಪಿಸುತ್ತೇನೆ."

"ಅಂದರೆ....ಮಹಮದ್ ಸುಲ್ತಾನರು ನಮ್ಮ ಮೇಲೇರಿ ಬರುವ
ುುನ್ನವೇ ನಾವೇ ದಾಳಿಮಾಡುವುದೆಂದು ಸೂಚಿಸುತ್ತಿರುವಿರಾ ಮಲ್ಲಿನಾಥ
ದಣ್ಣಾಯಕರೇ ?"

"ಹೌದು – ಮಹಾಪ್ರಭೂ. ಕಾಲಾವಕಾಶವಿತ್ತಲ್ಲಿ ಶತ್ರು ಪ್ರಬಲನಾಗುತ್ತಾನೆ. ದಕ್ಷಿಣ ಹಿಂದೂಸ್ಥಾನ ಎಲ್ಲಿ ಕೈಬಿಟ್ಟು ಹೋಗುವುದೋ ಎಂಬ ಭಯದಿಂದ ದಿಲ್ಲಿ ಸುಲ್ತಾನರು ಮಹಮದರ ನೆರವಿಗೆ ಬರಬಹುದು. ಆಗ ನಾವು ಒಬ್ಬ ಶತ್ರುವಿನ ಬದಲು ಇಬ್ಬರು ಶತ್ರುಗಳನ್ನೆದುರಿಸಬೇಕಾಗುತ್ತದೆ."

"ಅದಕ್ಕಾಗಿ ನೀವು ಅಂಜುವವರಲ್ಲವೆಂಬುದನ್ನು ನಾವು ಬಲ್ಲೆವು."

"ತಮ್ಮ ಚರಣಧೂಳಿಗಳಾದ ನಾವು ಯಾರೂ ಅಂಜುಬುರುಕರಲ್ಲ ಮಹಾಪ್ರಭು. ಆದರೆ ಉಗುರಿನಲ್ಲಿ ನಿವಾರಿಸಬಹುದಾದ ವ್ರಣಕ್ಕೆ ಕೊಡಲಿ ಪ್ರಯೋಗವೇಕೆ ಎಂದು ಯೋಚಿಸುತ್ತಿದ್ದೇನೆ."

"ನಿಷ್ಕಾರಣವಾಗಿ ನಾವು ಬಹಮನಿ ಅರಸರ ಮೇಲೆ ಪ್ರತಿರೋಧ ಮಾಡಿದರೆ ದೋಷಭಾಗಿಗಳಾಗುತ್ತೇವೆ."

"ನಿಷ್ಕಾರಣವೇಕೆ ? ಬಹಮನಿ ಸುಲ್ತಾನರು ನಮ್ಮ ಪ್ರಜೆಗಳಾದ ಅಕ್ಕಸಾಲಿಗರನ್ನು ದಂಡಿಸಲಿಲ್ಲವೇ ? ಅದೇ ಕಾರಣ ಸಾಕು."

"ಅದು ಕುಂಟುನೆಪವಾಗುತ್ತದೆ ಮಲ್ಲಿನಾಥರೇ !"

ಮುದ್ದಪ್ಪನಾಯಕರ ಮುಖ ಕೆಂಪೇರಿತು. ಅಣ್ಣನ ಶಾಂತಧೋರಣೆಗೆ ಸಿಡಿದೆದ್ದ ಮಹಾವೀರ, ತುಸು ಕಠಿಣವಾಗಿಯೇ

"ನಾವು ಏನು ಮಾಡಬೇಕೆಂಬುದನ್ನು ಮಹಾಪ್ರಭುಗಳೇ ಅಪ್ಪಣೆ ಕೊಡಿಸಲಿ" ಎಂದರು.

ಮಾರಪ್ಪನಾಯಕರು ಕೆರಳಿ,

"ಶ್ರೀಗುರುಗಳು ದಯೆಮಾಡಿಸಿದ್ದಾರೆ. ಅವರ ಅಭಿಪ್ರಾಯ ಕೇಳಿ ಆ ರೀತಿ ವರ್ತಿಸುವುದೇ ಲೇಸೆಂದು ಕಾಣುತ್ತದೆ. ಬಹಮನಿ ರಾಜ್ಯದ ಬಗ್ಗೆ ಮಹಾಪ್ರಭುಗಳಿಗೂ ನಮಗೂ ತೀವ್ರ ಭಿನ್ನಾಭಿಪ್ರಾಯ ಹುಟ್ಟಿದಂತಿದೆ."

"ಸಾಧ್ಯವಾದರೆ ಶಾಂತಿ, ಅವಶ್ಯಕವಾದರೆ ಯುದ್ಧವೆಂದು ಶ್ರೀಗುರುಗಳು ಅಪ್ಪಣೆ ಕೊಡಿಸಿದ್ದಾರೆ."

"ಶಾಂತಿಸಂಧಾನ ನಾವೇ ಆರಂಭಿಸುವುದೇ ?"

"ಅದರಲ್ಲೇನು ತಪ್ಪು. ಕೃಷ್ಣಾನದಿಯ ಸಮೀಪದ ಪ್ರದೇಶಗಳು ನಮಗೆ ಸೇರಬೇಕು. ಅವುಗಳನ್ನು ಬಿಟ್ಟುಕೊಡಲು ನಾವು ಬಹಮನಿ ಸುಲ್ತಾನರಿಗೆ ಪತ್ರ ಬರೆಯೋಣ. ಅವರು ಒಪ್ಪಿ ನಮ್ಮ ಗಡಿಪ್ರದೇಶವನ್ನು

ನಮಗೊಪ್ಪಿಸಿದರೆ ಯುದ್ಧ ಅಗತ್ಯವಿಲ್ಲ. ಅವರು ಒಪ್ಪದಿದ್ದರೆ ಸಹಜವಾಗಿ ನಮಗೆ ಸೇರಬೇಕಾದ ಭಾಗಗಳನ್ನು ವಶಪಡಿಸಿಕೊಳ್ಳಲು ನಾವು ಸ್ವತಂತ್ರ ರಾಗಿದ್ದೇವೆ."

ಸಭಾಸದರು ತಮ್ಮತಮ್ಮಲ್ಲಿಯೇ ವಿಚಾರವಿನಿಮಯ ಮಾಡಿಕೊಂಡು "ಪತ್ರವನ್ನು ಈಗಲೇ ಸಿದ್ಧಗೊಳಿಸುವುದು ಯುಕ್ತವಾಗಿ ಕಂಡು ಬರುತ್ತದೆ" ಎಂದರು.

ಕಾರಕೂನ ರಾಮರಾಯ ಲೇಖನ ಸಾಮಗ್ರಿಗಳನ್ನೂ ಸಿದ್ಧಪಡಿಸಿ ಕೊಂಡು, ಪ್ರಭುಗಳ ಮುಂದೆ ನಿಂತ.

ಬುಕ್ಕರಾಯರು ಸಾವಕಾಶವಾಗಿ ಯೋಚಿಸುತ್ತ

"ಷಹನ್‌ಷಾ, ಬಹಮನಿರಾಜ್ಯದ ಸುಲ್ತಾನರಾದ ಶ್ರೀ ಶ್ರೀ ಮಹ ಮದ್ ಪಾದಶಹಾ ಅವರ ಸ॥ಕ್ಕೆ, ವಿಜಯನಗರದ ಸಮ್ರಾಟರಾದ ಶ್ರೀಶ್ರೀ ಬುಕ್ಕರಾಯರು ಮಾಡುವ ಅನೇಕ ನಮಸ್ಕಾರಗಳು.

ಭಗವದ್ಕೃಪೆಯಿಂದ ತಾವೂ, ರಾಣೀವಾಸದವರೂ, ತಮ್ಮ ಸಮಸ್ತ ಪ್ರಜರೂ ಆರೋಗ್ಯದಿಂದಿರುತ್ತಿರೆಂದು ನಂಬಿದ್ದೇವೆ.

ಸುಮಾರು ಮುನ್ನೂರುಐವತ್ತು ವರ್ಷಗಳಿಂದ – ಇಸ್ಲಾಂ ಭಾರತ ವರ್ಷವನ್ನು ಪ್ರವೇಶಿಸಿದಂದಿನಿಂದ – ಈ ರಾಷ್ಟ್ರ ಸಮರಭೂಮಿಯಾಗಿದೆ. ಮಹಮದ್ ಘಜ್ನಿ, ಮಹಮದ್ ಘೋರಿ, ಮಹಮದ್ ತೊಘಲಕ್ ಈ ಮೂವ್ವರೂ ಸಂಪತ್ಸಂಗ್ರಹ, ರಾಜ್ಯಾಕಾಂಕ್ಷೆಯ ಲೋಭಕ್ಕೆ ಕಟ್ಟುಬಿದ್ದು ಭಾರತವರ್ಷವನ್ನು ರಣಕುಂಡವನ್ನಾಗಿಸಿಬಿಟ್ಟಿದ್ದಾರೆ. ನಮ್ಮ ರಾಷ್ಟ್ರದ ಇತಿಹಾಸ ಯುದ್ಧ, ರಕ್ತಪಾತಗಳ ದುರಂತಕಥೆಯಾಗದೆ ಧರ್ಮಜೀವನದ ಮಹೋಜ್ಜ್ವಲ ಚರಿತ್ರೆಯಾಗಲಿ ಎಂಬುದೇ ನಮ್ಮ ಆಕಾಂಕ್ಷೆ. ಹಿಂದು ಗಳ ಪರವಾಗಿ ನಾವು, ಮುಸಲ್ಮಾನರ ಪರವಾಗಿ ನೀವು ಈ ದೀಕ್ಷೆ ಹೊತ್ತು ಚಿರಶಾಂತಿಯನ್ನುಗಳಿಸಿ, ದೇಶ ಸಮೃದ್ಧವಾಗಿ ಬೆಳೆಯಲು ಶ್ರಮಿಸಬೇಕು. ತಮ್ಮ ಪೂಜ್ಯ ಹಿರಿಯರಾದ ಕೀರ್ತಿಶೇಷ ಹಸನ್ ಸುಲ್ತಾನರು ಶಾಂತಿ ಪ್ರೇಮ, ಸೌಹಾರ್ದದ ಪ್ರತೀಕವಾಗಿದ್ದರು. ಅವರು ಹಾಕಿಕೊಟ್ಟ ದಾರಿಯಲ್ಲೇ ತಾವೂ ನಡೆದು ಶಾಂತಿಸ್ಥಾಪಕರೆಂದು ಅಮರ ಕೀರ್ತಿಯನ್ನು ಗಳಿಸಬೇಕು.

ಕೃಷ್ಣಾನದಿಯ ಸುತ್ತಮುತ್ತಲಿನ ಪ್ರದೇಶಗಳು ನ್ಯಾಯವಾಗಿ ನಮ್ಮವು. ಅವುಗಳನ್ನು ತಾವು ಉದಾರಚಿತ್ತರಾಗಿ ನಮ್ಮ ವಶಪಡಿಸಿ ಹಿಂದೂ - ಮುಸ್ಲಿಮರ ಸಖ್ಯಕ್ಕೆ ಬಲವಾದ ಬುನಾದಿಯನ್ನು ಹಾಕ ಬೇಕಾಗಿ ಪ್ರಾರ್ಥಿಸುತ್ತೇವೆ.

ಇಂತು ನಿಮ್ಮ ವಿಶ್ವಾಸಾಕಾಂಕ್ಷಿ ಬುಕ್ಕರಾಯರು."

ಮಾರಪ್ಪನಾಯಕರು ಪತ್ರ ಮುಗಿದೊಡನೆಯೇ ಸಿಡಿದೆದ್ದು

"ಪತ್ರದಲ್ಲಿ ಯಾಚನೆಯ ಧ್ವನಿಯಿದೆ ಪ್ರಭೂ. ವಿಜಯನಗರದ ಸಾಮ್ರಾಟರು ಒಂದು ತುಂಡು ರಾಜ್ಯದ ಸುಲ್ತಾನನನ್ನು ಭಿಕ್ಷೆ ಬೇಡುವ ಅಗತ್ಯವಿಲ್ಲ."

"ಮಾರಪ್ಪನಾಯಕರೇ, ರಾಜ್ಯನಿರ್ವಹಣದಲ್ಲಿ ವಿಜಯನಗರದವರು ಹೇಗೆ ಲೋಕಕ್ಕೆ ಮಾದರಿಯಾಗಬೇಕೋ ಹಾಗೇ ವಿನಯ, ಶೀಲ, ಸೌಜನ್ಯಗಳಲ್ಲಿಯೂ ಲೋಕಕ್ಕೆ ಮಾದರಿಯಾಗಬೇಕು. ಬಹಮನಿ ರಾಜ್ಯ ಬಹಳ ಸಣ್ಣದು ನಿಜ. ಆದರೆ ಅದನ್ನು ಆಳುತ್ತಿರುವ ಸುಲ್ತಾನರನ್ನು ನಾವು ಗೌರವವಾಗಿ ಸಂಬೋಧಿಸಬೇಕು. ಸುಲ್ತಾನರು ನಮ್ಮ ಪ್ರಾರ್ಥನೆ ಯನ್ನು ಅಂಗೀಕರಿಸಿದರೆ ಸಂತೋಷ - ನಿರಾಕರಿಸಿದರೆ ಯುದ್ಧವಿದ್ದೇ ಇದೆಯಲ್ಲ! ವಿನಯ, ಸೌಶೀಲ್ಯ ದೌರ್ಬಲ್ಯದ ಚಿಹ್ನೆಗಳೆಂದು ಭಾವಿಸ ಬೇಡಿ ಮಾರಪ್ಪನಾಯಕರೇ. ಬಲ ಬೆಳೆದಷ್ಟೂ ಸಂಯಮ ಬೆಳೆಯಬೇಕು. ಈ ಸಂಯಮವೇ ನಮ್ಮ ರಕ್ಷಾಕವಚವಾಗುತ್ತದೆ."

ಪ್ರಭುಗಳ ನುಡಿಯ ಅಂತರಾರ್ಥವರಿತ ಹಿರಿಯ ಮಲ್ಲಿನಾಥ ದಣ್ಣಾಯಕರ ಕಣ್ಣುಗಳಲ್ಲಿ ಆನಂದಬಾಷ್ಪಗಳುದುರಿದವು.

"ಪ್ರಭೂ - ತಾವು ಮಹಾವೀರರೂ ಆಗಿದ್ದೀರಿ - ಧರ್ಮಪ್ರಭುಗಳೂ ಆಗಿದ್ದೀರಿ. ನಾವು ಒಂದೇ ದೃಷ್ಟಿಗೆ ಬದ್ಧರು. ತಾವು ಹಲವು ದೃಷ್ಟಿಯಲ್ಲಿ ವಿವೇಚಿಸಿ, ಸಾಮ್ರಾಜ್ಯದ ಭವಿಷ್ಯ ಭದ್ರಪಡಿಸಲು ಯೋಚಿಸುತ್ತೀರಿ. ನಾವು ದುಡುಕಿ ಆಡಿದ ಮಾತುಗಳನ್ನು ಕ್ಷಮಿಸಬೇಕು."

"ಪತ್ರವನ್ನು ಸಕಲ ಮರ್ಯಾದೆಗಳೊಡನೆ ಕೂಡಲೆ ಕಳಿಸಿಕೊಡಿ. ಸುಲ್ತಾನರ ಮಾರುತ್ತರ ಬಂದ ಮೇಲೆ ಮುಂದಿನ ಯೋಚನೆ."

ಎಂದು ಮೇಲಕ್ಕೆದ್ದರು.

# ೮

ಬಹಮನಿಯ ಸುಲ್ತಾನ್ ಮಹಮುದ್ ಕೆಲವು ವಿಷಯಗಳಲ್ಲಿ ತಂದೆ ಹಸನ್‌ನಿಗೆ ತೀರ ಭಿನ್ನವಾಗಿದ್ದ; ಕೆಲವು ವಿಷಯಗಳಲ್ಲಿ ತಂದೆ – ಮಗನ ಮನೋಭಾವ ಒಂದೇ ಬಗೆಯದಾಗಿತ್ತು.

ಸ್ವಪ್ರಯತ್ನದಿಂದ ರಾಜ್ಯಗಳಿಸಿದ ಹಸನ್ ತನ್ನ ಉತ್ತರವಾದಿತನವನ್ನು ಪೂರ್ಣವಾಗಿ ಅರಿತಿದ್ದ. ಐಗುಪ್ತದಲ್ಲಿದ್ದ ನಾಮಮಾತ್ರ ಖಲೀಫನಾಗಿದ್ದ ಅಲ್ – ಮುತಾದಿದ್‌ನ ಮಾಂಡಲಿಕತನವನ್ನು ಅವನು ಒಪ್ಪಿಕೊಂಡು, ಇಸ್ಲಾಂ ಶಾಹಿಯನ್ನು ದಕ್ಷಿಣದಲ್ಲಿ ವಿಸ್ತರಿಸಲು ಬದ್ಧ ಕಂಕಣನಾಗಿದ್ದರೂ ಹಿಂದುಗಳ ವಿರುದ್ಧವಾಗಿ ನಡೆದುಕೊಂಡು, ಅವರನ್ನು ಎದುರು ಹಾಕಿಕೊಳ್ಳಲು ಪ್ರಯತ್ನಿಸಲಿಲ್ಲ. ಹಿಂದು ಮುಸ್ಲಿಮರನ್ನು ಸಮಾನವಾಗಿ ಕಾಣಲು ಪ್ರಯತ್ನಿಸುತ್ತಿದ್ದ.

ತಂದೆಯ ನಿಧಸಾನಂತರ ೧೩೫೮ರಲ್ಲಿ ಪಟ್ಟಕ್ಕೆ ಬಂದ ಮಹಮುದ್ ತಂದೆಗಿಂತಲೂ ಚಾಣಾಕ್ಷನೂ ರಾಜತಂತ್ರಕುಶಲನೂ ಆಗಿದ್ದ. ಅವನ ರಾಜ್ಯಾಡಳಿತ ವರ್ಗ ಎಂಟು ಮಂದಿ ಮಂತ್ರಿಗಳಿಂದ ಕೂಡಿತ್ತು. (೧) **ವಕೀಲ್ – ಅಸ್ – ಸಲ್ತಾನಾ** : ರಾಜ್ಯದ ದಣ್ಣಾಯಕ. ರಾಜನು ಪ್ರತಿನಿಧಿ. ರಾಜನಿಲ್ಲದಿದ್ದಾಗ ಅವನ ಸಕಲ ಕಾರ್ಯಗಳನ್ನೂ ನಿರ್ವಹಿಸುತ್ತಿದ್ದ ಅಧಿಕಾರಿ. (೨) **ವಜೀರಿ ಕುಲ್** : ಇತರ ಮಂತ್ರಿಗಳ ಕೆಲಸ ಕಾರ್ಯಗಳನ್ನೂ ಪರಾಮರ್ಶಿಸುವ ಮುಖ್ಯಮಂತ್ರಿ. (೩) **ಅಮಿರಾರಿ ಜುಮ್ಲಾ** : ಹಣಕಾಸಿನ ಮಂತ್ರಿ. (೪) **ವಜೀರಿ ಅಷ್ರಾಫ್** : ರಾಜ್ಯದ ಹೊರಗಣ ರಾಜಕಾರಣ ನೋಡಿಕೊಳ್ಳುವ ಮಂತ್ರಿ (೫) **ನಾಜೀರ್** : ಹಣಕಾಸಿನ ಉಪಮಂತ್ರಿ (೬) **ಪೇಷ್ವಾ** : ದಣ್ಣಾಯಕನ ಸಹಾಯಕ ಮಂತ್ರಿ (೭) **ಕೊತ್ವಾಲ್** : ದಂಡಾಧೀಶ (೮) **ಸದರಿ ಜಹಾನ್** ; ನ್ಯಾಯಾಧೀಶ. ಧಾರ್ಮಿಕ ವಿಚಾರಗಳು, ದಾನ, ದತ್ತಿಗಳ ಮೇಲ್ವಿಚಾರಕ.

ಆಡಂಬರ, ಪ್ರದರ್ಶನ ಪ್ರಿಯನಾಗಿದ್ದ ಮಹಮುದನಿಗೆ ಇನ್ನೂರು ಮಂದಿ ಅಂಗರಕ್ಷಕರೂ, ನಾಲ್ಕು ಸಾವಿರ ಗೌರವ ಸೈನಿಕರೂ ಇದ್ದರು.

ಸ್ವಭಾವತಃ ಮಹಮದ್ ಕ್ರೂರಿಯಲ್ಲದಿದ್ದರೂ ಕ್ರೌರ್ಯಕ್ಕೆ ಹೇಸು ತ್ತಿರಲಿಲ್ಲ. ತಂದೆಗಿಂತಲೂ ಕಟುಧರ್ಮಿಯಾಗಿದ್ದ ಅವನು ಇಸ್ಲಾಮಿನ ಕೀರ್ತಿ ವಿಸ್ತರಣೆ, ರಾಜ್ಯ ಬೆಳವಳಿಗೆಗೆ ಯಾವ ತತ್ತ್ವವನ್ನೂ ಬೇಕಾದರೂ ಬಲಿ ಗೊಡಲು ಸಿದ್ಧನಾಗಿದ್ದ.

ಹಸನ್ ಕಟುಧರ್ಮಿಯಾಗಿದ್ದರೂ ಶೀಲ ಸಂಪನ್ನನಾಗಿದ್ದ. ಮದಿರೆ, ಮಾನಿನಿಯರಂತೂ ಅವನ ಬಳಿ ಸುಳಿಯುವಂತಿರಲಿಲ್ಲ.

ಮಹಮದ್ ರಸಿಕನಾಗಿದ್ದುದಲ್ಲದೆ ಭೋಗಪ್ರಿಯನೂ ಆಗಿದ್ದ. ಬೇರೆ ಬೇರೆ ದೇಶಗಳಿಂದ ಆರಿಸಿಕೊಂಡುತಂದಿದ್ದ ಸುರಸುಂದರಿಯರು ಅವನ ಊಳಿಗದ ದಾಸಿಯರಾಗಿದ್ದರು. ತುರ್ಕಿ, ಆಫಘಾನಿಸ್ತಾನ್, ದಿಲ್ಲಿ, ಲಕ್ನೋ, ಇರಾಣಗಳಿಂದ ಮನಮೋಹಕರಾದ ಸುಂದರಿಯರನ್ನೂ ಬರಮಾಡಿಕೊಂಡು ಅವರ ಸಂಗದಲ್ಲಿ ಮಹಮದ್ ಸದಾಕಾಲವನ್ನೂ ಪ್ರಮತ್ತನಾಗಿ ಕಳೆಯುತ್ತಿದ್ದ.

ಮಹಮದನ ಕಾಮನಪಡೆಯಲ್ಲಿ ಅವನನ್ನು ಸಂಪೂರ್ಣವಾಗಿ ವಶಪಡಿಸಿ ಕೊಂಡಿದ್ದವಳು ಸುರೈಯ್ಯಾ. ಅವಳೇ ಬೇಗಂ – ಮಹಲಿನ ಮಹಾರಾಣಿ. ಅವಳ ಕುಡಿನೋಟಕ್ಕೆ ಉಳಿದ ಹೆಂಗಳೆಯರು ಹೆದರುತ್ತಿದ್ದರು.

ಸುರೈಯ್ಯನನ್ನೂ ಕೈವಶಪಡಿಸಿಕೊಳ್ಳುವುದಕ್ಕೆ ಮಹಮದ್ ಅಲ್ಪಸ್ವಲ್ಪ ಪ್ರಯಾಸಪಡಲಿಲ್ಲ. ಸುಲ್ತಾನನ ಇಚ್ಛೆ ಪೂರೈಸುವ ಮುನ್ನ ಸುರೈಯ್ಯ ತನ್ನ ಸಕಲ ಇಷ್ಟಾರ್ಥಗಳನ್ನೂ ಪೂರೈಸಿಕೊಂಡು, ಅವನನ್ನೂ ಕೈಗೊಂಬೆ ಮಾಡಿಕೊಂಡಿದ್ದಳು.

ಸುಲ್ತಾನನ ಜನಾನಾಕ್ಕೆ ಹೆಣ್ಣುಗಳನ್ನೂ ಒದಗಿಸುವುದಕ್ಕೆ ಒಂದು ಪ್ರತ್ಯೇಕ ತಂಡವೇ ಇತ್ತು. ಅದರ ನಾಯಕ ಅಬ್ದುಲ್ಲಾನ ಮೇಲೆ ಸುಲ್ತಾನರ ಹೊರತು ಯಾರೂ ಅಧಿಕಾರ ಮಾಡುವಂತಿರಲಿಲ್ಲ. ವಕೀಲ್ ಅಸ್ ಸಲ್ತಾನಾ, ವಜೀರಿ ಕುಲ್ ಕೂಡ ಅಬ್ದುಲ್ಲಾನ ಪ್ರಭಾವಕ್ಕೆ ಹೆದರುತ್ತಿದ್ದರು.

ಮೆಕ್ಕಾಯಾತ್ರೆ ಮಾಡಿಕೊಂಡು ಬರುವ ನೆಪದಲ್ಲಿ ಕಲ್ಬುರ್ಗಿ ಬಿಟ್ಟು ಹೋದ ಅಬ್ದುಲ್ಲಾ ದೂರ ಪ್ರಾಚ್ಯ ರಾಷ್ಟ್ರಗಳಲ್ಲಿ ಸಂಚರಿಸಿಕೊಂಡು ಇಸ್ತಾಂಬೂಲಿನ ವಸತಿಗೃಹವೊಂದರಲ್ಲಿ ಬೀಡು ಬಿಟ್ಟ. ಮನಸ್ವೀ ಹಣ ಖರ್ಚುಮಾಡುತ್ತಿದ್ದ ಅಬ್ದುಲ್ಲಾನ ಬಗ್ಗೆ ವಸತಿಗೃಹದ ಮಾಲಿಕ ಜಾಫರ್ ಅತ್ಯಂತ ಭಯಭಕ್ತಿಯಿಂದ ನಡೆದುಕೊಳ್ಳುತ್ತಿದ್ದ. ತಾನು ಸ್ವರ್ಣಭೂಮಿ ಯಾದ ಹಿಂದೂಸ್ಥಾನದಿಂದ ಬಂದಿದ್ದ ಭಾರಿ ವರ್ತಕನೆಂದೂ ಅಬ್ದುಲ್ಲಾ ಹೇಳಿ ಕೊಂಡಿದ್ದ. ಅಬ್ದುಲ್ಲನನ್ನು ಕಾಣಲು ಪ್ರತಿನಿತ್ಯ ಹಲವಾರು ಹೆಂಗಸರು

ಬರುತ್ತಿದ್ದರೂ ಜಾಫರ್ ಯಾವ ವಿರೋಧವನ್ನೂ ಸೂಚಿಸಿರಲಿಲ್ಲ. 'ವರ್ತಕ ಮಹಾರಸಿಕ. ಅವನ ಸಂತೋಷಕ್ಕೆ ನಾನೇಕೆ ಅಡ್ಡಿಬರಲಿ. ಹಿಡಿ ಹಿಡಿಯಲ್ಲಿ ಹೊನ್ನೂ ಕೊಡುತ್ತಿದ್ದಾನೆ' ಎಂದು ಜಾಫರ್ ಸಮಾಧಾನಪಟ್ಟುಕೊಂಡಿದ್ದ.

ಒಂದು ದಿನ ಸಂಜೆ ಸಂಚಾರ ಮುಗಿಸಿಕೊಂಡು ವಸತಿಗೃಹ ಸೇರಿದ ಅಬ್ದುಲ್ಲಾ ಜಾಫರನನ್ನು ಕರೆದು

"ನಾನು ಊರಿಗೆ ಹಿಂದಿರುಗ ಬೇಕಾದ ದಿನಗಳು ಸಮೀಪಿಸಿದವು ಜಾಫರ್. ಹೋಗುತ್ತೇನೆ. ನಾನು ಬಂದ ಕೆಲಸ ಮಾತ್ರ ಆಗಲಿಲ್ಲ."

"ಏನಾಗಬೇಕಾಗಿತ್ತು ಹುಜೂರ್....ಗುಲಾಮನಿಗೆ ತಾವು ಅಪ್ಪಣೆ ಮಾಡಿದರೆ ಸಾಕು. ತಮ್ಮ ಪಾದಧೂಳಿಯನ್ನೂ ನಾನು ನೆತ್ತಿಯ ಮೇಲೆ ಮುಡಿಯಲು ಸಿದ್ಧವಾಗಿಲ್ಲವೇ ?"

"ಈ ಒಣ ಉಪಚಾರದಿಂದ ಏನೂ ಪ್ರಯೋಜನವಿಲ್ಲ ಜಾಫರ್."

"ಅಲ್ಲಾ ಮೇಲೆ ಆಣೆಮಾಡಿ ಹೇಳುತ್ತೇನೆ ಹುಜೂರ್. ತಾವು ಅಪ್ಪಣೆ ಕೊಡಿಸಿ – ಜಾಫರನ ವಸತಿಗೃಹಕ್ಕೆ ಬಂದವರು ಯಾರೂ ಅತೃಪ್ತರಾಗಿ ಹೋಗಬಾರದು."

ಅಬ್ದುಲ್ಲಾ ಸ್ವಲ್ಪ ಯೋಚಿಸಿ, ತನ್ನ ತುರುಚುಗಡ್ಡ ಕೆರೆದುಕೊಳ್ಳುತ್ತಾ

"ಈ ರಸ್ತೆಯುಂಚಿನಲ್ಲಿ, ಬಲಕ್ಕೆ ತಿರುಗುವ ಮೂಲೆಯಲ್ಲಿ ಒಂದು ಮನೆ ಇದೆ ನೋಡಿರುವೆಯಾ ಜಾಫರ್ ?"

"ನೋಡಿದ್ದೇನೆ ಸರ್ಕಾರ್."

"ಆ ಮನೆಯಲ್ಲಿ ಒಬ್ಬ ಸುಂದರಿಯಿದ್ದಾಳೆ – ಅವಳು ಯಾರು ನಿನಗೆ ಗೊತ್ತೇ ?"

"ಗೊತ್ತು. ಬಹಾದೂರ್ ಖಾನನ ಹೆಂಡತಿ ಸುರೈಯ್ಯಾ."

"ಅವಳ..........."

"ಅದು ಆಗತಕ್ಕದಲ್ಲ ಸರ್ಕಾರ್. ಗಂಡ ಹೆಂಡತಿ ಬಹಳ ಅನ್ಯೋನ್ಯವಾಗಿದ್ದಾರೆ."

"ಬಹಾದೂರ್ ಖಾನ್ ಏನು ಮಾಡುತ್ತಿದ್ದಾನೆ ?"

"ಸುಲ್ತಾನರ ಅಶ್ವಬಲದಲ್ಲಿ ಸಿಪಾಯಿಯಾಗಿದ್ದಾನೆ. ಅಶ್ವ ಪರೀಕ್ಷೆಯಲ್ಲಿ ಬಹಾದೂರ್ ಖಾನ್ ನಿಪುಣ."

"ನೀನು ನನಗೊಂದು ಉಪಕಾರ ಮಾಡುವೆಯಾ ಜಾಫರ್.

" ಹೇಳಿ ಸರ್ಕಾರ್."

" ಬಹಾದೂರ್ ಖಾನನನ್ನು ಇಲ್ಲಿಗೆ ಬರಮಾಡಿ, ಪರಿಚಯ ಮಾಡಿ ಕೊಡು."

" ಅದು ಸುಲಭಸಾಧ್ಯ."

" ಊರಿಗೆ ಕೊಂಡೊಯ್ಯಲು ನನಗೆ ಕೆಲವು ಒಳ್ಳೆಯ ಅರಬ್ಬೀ ಕುದುರೆಗಳು ಬೇಕಾಗಿವೆ. ಬಹಾದೂರ್ ವ್ಯಾಪಾರಮಾಡಿ ಕೊಡಿಸಲಿ – ಅವನೇ ಅವು ಗಳ ಜತೆ ಬರಬೇಕಾಗುತ್ತದೆ. ಅವನಿಗೆ ಒಪ್ಪಿಗೆಯಾದರೆ ನಾನು ನಮ ಸುಲ್ತಾನರಿಗೆ ಅರಿಕೆಮಾಡಿಕೊಂಡು ಅವನಿಗೆ ಸರ್ದಾರ್ ಪದವಿ ಕೊಡಿಸುತ್ತೇನೆ. ನಮ್ಮ ರಾಜ್ಯದಲ್ಲಿ ನಿಲ್ಲಲು ಇಷ್ಟವಿಲ್ಲದಿದ್ದರೆ ಅವನು ನಾಲ್ಕು ದಿನವಿದ್ದು ಹಿಂದೂ ಸ್ಥಾನ ನೋಡಿಕೊಂಡು ಇಲ್ಲಿಗೆ ಹಿಂದಿರುಗಬಹುದು."

" ಸಲಹೆ ಯೋಗ್ಯವಾಗಿದೆ. ಬಹಾದೂರ್ ಒಪ್ಪಿದರೂ ಒಪ್ಪಬಹುದು."

" ಅವನನ್ನು ಒಪ್ಪಿಸುವ ಭಾರ ನಿನ್ನದು."

ಎಂದು ತನ್ನ ಸೊಂಟದಲ್ಲಿ ಸೆಕ್ಕಿಕೊಂಡಿದ್ದ ಸುವರ್ಣನಾಣ್ಯಗಳ ಒಂದು ಸಣ್ಣ ಚೀಲವನ್ನೆತ್ತಿ ಜಾಫರನ ಕಡೆ ಒಗೆದ.

ಜಾಫರ್ ಚೀಲವನ್ನೆತ್ತಿಕೊಂಡು, ಬಿಚ್ಚಿನೋಡಿ, ನಗೆಮೊಗದಿಂದ ಅದನ್ನು ತನ್ನ ಒಳ ಅಂಗಿಯ ಉದ್ದನೆಯ ಕಿಸೆಯಲ್ಲಿ ಇಳಿಬಿಟ್ಟು

" ಬಹಾದೂರನನ್ನು ಒಪ್ಪಿಸುತ್ತೇನೆ ಸರ್ಕಾರ್." ಎಂದ.

" ಸುರೈಯ್ಯಳನ್ನು ಅವನು ಜತೆಯಲ್ಲಿ ಕರೆದುಕೊಂಡು ಬರಬೇಕು. ಅದಕ್ಕವನನ್ನು ನೀನು ಒಪ್ಪಿಸಿದರೆ ಇದರ ಮೂರರಷ್ಟು ಥೈಲಿ ತುಂಬ ಚಿನ್ನದ ನಾಣ್ಯ ಕೊಡುತ್ತೇನೆ."

" ಸುರೈಯ್ಯಾ ಮಹಾ ಗರ್ವಿಷ್ಠೆ. ಅಲ್ಲದೆ ಅವಳು ಬಹಾದೂರನನ್ನು ಕಂಡರೆ ಪ್ರಾಣ ಬಿಡುತ್ತಾಳೆ."

" ಸುರೈಯ್ಯ ಬಹಾದೂರನ ಜತೆ ಬಂದರೆ ಸಾಕು – ಉಳಿದ ವಿಷಯ ನನಗಿರಲಿ."

" ಆಗಲಿ ಸರ್ಕಾರ್ "

ಎಂದು ಜಾಫರ್ ಒಪ್ಪಿದ.

ಜಾಫರನ ಕಣ್ಣುಮುಂದೆ ಚಿನ್ನದ ದೊಡ್ಡ ಥೈಲಿ ತೂಗಾಡುತ್ತಿತ್ತು. ಈ ಬೇಟೆಯನ್ನು ಕಳೆದುಕೊಳ್ಳಬಾರದೆಂದು ನಿರ್ಧರಿಸಿದ ಜಾಫರ್ ಮುಂಡಾಸ ಸುತ್ತಿಕೊಂಡು ಸುರೈಯ್ಯಳನ್ನು ಕಾಣಲು ಹೋದ.

ಬಿಸಿಲಿನಲ್ಲಿ ಬಂದ ಜಾಫರನನ್ನು ಆದರಿಸಿ ಕುಳ್ಳಿರಿಸಿದ ಸುರೈಯ್ಯಾ ಅವನ ಮುಂದೆ ಷರಬತ್ತಿನ ಬಟ್ಟಲು ತಂದಿಟ್ಟು

" ತೆಗೆದುಕೋ ದಾದಾ – ಬಹಳ ಅಪರೂಪಕ್ಕೆ ಬಂದಿದ್ದೀ"

ಎಂದು ಉಪಚರಿಸಿದಳು.

ಜಾಫರ್ ಷರಬತ್ತು ಕುಡಿದು ತನ್ನ ಮುಂಡಾಸದ ಚುಂಗಿನಿಂದ ಮುಖದ ಮೇಲಣ ಬೆವರು ಹನಿಗಳನ್ನು ಒರಸಿಕೊಳ್ಳುತ್ತಾ

" ಬಹಾದೂರ್ ಇನ್ನೂ ಮನೆಗೆ ಬಂದಿಲ್ಲವೇ ?"

ಎಂದು ಕೇಳಿದ.

" ಇನ್ನೂ ಬಂದಿಲ್ಲ."

" ಎಷ್ಟು ಹೊತ್ತಿಗೆ ಬರುತ್ತಾನೆ."

" ಗೊತ್ತಿಲ್ಲ. ಏನಾದರೂ ಕೆಲಸವಿತ್ತೇ ದಾದಾ."

" ತುಂಬ ಕೆಲಸವಿತ್ತು. ಕುದುರೆ ಕಾಸ್ದಾರನಾಗಿರುವ ಬಹಾದೂರ್ ಬಹದೂರ್ ಆಗುವ ಕಾಲ ಬಂದಿದೆ ಸುರೈಯ್ಯಾ."

" ಹಾಗಂದರೆ ?"

" ನನ್ನ ವಸತಿಗೃಹಕ್ಕೆ ಹಿಂದೂಸ್ಥಾನದ ಒಬ್ಬ ಪ್ರವಾಸಿ ಬಂದಿದ್ದಾನೆ. ಭಾರಿ ಶ್ರೀಮಂತ. ಅವನಿಗೆ ಕೆಲವು ಅರಬ್ಬೀ ಕುದುರೆಗಳು ಬೇಕಾಗಿವೆಯಂತೆ. ಬಹಾದೂರ್ ಅಶ್ವಪರೀಕ್ಷೆಯಲ್ಲಿ ಬುದ್ಧಿವಂತ – ಅವನ ನೆರವು ಪಡೆದರೆ ಒಳ್ಳೆಯ ಕುದುರೆಗಳು ಸಿಕ್ಕುತ್ತವೆ ಎಂದು ನಾನು ಸೂಚಿಸಿದೆ. ಬಹಾದೂರ್ ನಾಲ್ಕುದಿನ ಕಷ್ಟಪಟ್ಟರೆ ನಿನ್ನ ಬಡತನವೆಲ್ಲಾ ಪರಿಹಾರವಾಗುತ್ತದೆ—ಕೈತುಂಬ ಹಣ ಸಿಕ್ಕುತ್ತದೆ."

" ಅಷ್ಟು ಉಪಕಾರಮಾಡು ದಾದಾ – ಬಡತನ ಅನುಭವಿಸಿ ಅನುಭವಿಸಿ ನಮಗೂ ಸಾಕಾಗಿದೆ."

" ನಿಮ್ಮ ಬಡತನ ನೀಗುವ ಕಾಲ ಬಂದಿದೆ ಬೇಟಿ – ಕುದುರೆ ಗಳೊಂದಿಗೆ ಬಹಾದೂರ್ ಹಿಂದೂಸ್ಥಾನಕ್ಕೆ ಬರಬೇಕೆಂದು ವರ್ತಕ ಹೇಳುತ್ತಿದ್ದಾನೆ."

" ಅವರೊಬ್ಬರೇ ಹೇಗೆ ಹೋಗುವುದು ?"

" ಭಯವೇನು. ಹೋಗಿ ಬರಲಿ."

" ಅವರು ಹಿಂದಕ್ಕೆ ಬರದೆಯೇ ಇದ್ದರೆ...."

" ಹಿಂದೂಸ್ಥಾನದಲ್ಲಿ ನಿಂತು ಬಹಾದೂರ್ ಏನು ಮಾಡುತ್ತಾನೆ.

ಕುದುರೆಗಳನ್ನೊಪ್ಪಿಸಿ ಹಿಂದಕ್ಕೆ ಬಂದೇ ಬರುತ್ತಾನೆ."

"ನಾನಷ್ಟು ಧೈರ್ಯವಾಗಿ ಹೇಳಲಾರೆ ದಾದಾ – ಹಿಂದೂಸ್ಥಾನದ ತುಂಬ ಸುಂದರಿಯರಿದ್ದಾರಂತೆ !"

ಜಾಫರ್ ಗಹಗಹಿಸಿ ನಕ್ಕು

"ಹೆಣ್ಣು ಹೆಣ್ಣೇ ಅಲ್ಲವೇ ಸುರೈಯ್ಯಾ – ಸ್ವಭಾವಜನ್ಯವಾದ ಅಸೂಯೆ, ಅಪನಂಬಿಕೆ ಕಳೆದುಕೊಳ್ಳುವುದಕ್ಕೆ ನಿಮಗೆ ಸಾಧ್ಯವೇ ಇಲ್ಲ. ಹೋಗಲಿ. ಒಂದು ಕೆಲಸಮಾಡು."

"ಏನು ಹೇಳು ದಾದಾ."

"ನೀನೂ ಬಹಾದೂರನ ಜತೆ ಹೋಗಿ ಬಾ. ಇಬ್ಬರೂ ಹಿಂದೂಸ್ಥಾನ ನೋಡಿದಂತಾಗುತ್ತದೆ."

"ನನ್ನನ್ನು ಕರೆದುಕೊಂಡು ಹೋಗಲು ಅವರು ಒಪ್ಪಬೇಕಲ್ಲ."

"ನನ್ನನ್ನು ಕರೆದುಕೊಂಡು ಹೋಗದಿದ್ದರೆ ನೀವೂ ಹೋಗಬೇಡಿ ಎಂದು ನೀನು ಹೇಳಿದರಾಯಿತು. ಸಹಸ್ರಾರು ಚಿನ್ನದ ಮೊಹರುಗಳ ಸಂಪಾದನೆ ಬಿಡಲಾರದೆ ಬಹಾದೂರ್ ನಿನ್ನನ್ನೂ ಕರೆದುಕೊಂಡು ಹೋಗುತ್ತಾನೆ."

ದಾದಾ ಜಾಫರನ ಸಲಹೆಯನ್ನಂಗೀಕರಿಸಿದ ಸುರೈಯ್ಯಾ ಸಂತೋಷಿಸುತ್ತಾ

"ಹಾಗೇ ಮಾಡುತ್ತೇನೆ ದಾದಾ" ಎಂದಳು.

"ಸಂಜೆಗೆ ಬಹಾದೂರನನ್ನು ನಮ್ಮ ಮನೆಗೆ ಕಳಿಸು – ವ್ಯಾಪಾರಿಯೂ ಅಲ್ಲೇ ಇರುತ್ತಾನೆ. ಮಾತು ಕತೆ ಮುಗಿಸಿಬಿಡುತ್ತೇವೆ."

ಎಂದು ಹೇಳಿ ಹೊರಟ.

ಜಾಫರನ ಸಂಧಾನ ಸಫಲವಾದುದನ್ನು ಕೇಳಿದ ಅಬ್ದುಲ್ಲಾ ಆನಂದ ತುಂದಿಲನಾಗಿ

"ಸಂಜೆಗೆ ಸೊಗಸಾದ ಮೇಜುವಾನಿ ಏರ್ಪಡಿಸು ಜಾಫರ್. ಖೊರ್ಸಾನ್, ಇಸ್ಫಹಾನಿನ ಸುರೆಯಲ್ಲೇ ಬಹಾದೂರ್ ಸ್ನಾನ ಮಾಡಲಿ."

ಎಂದು ಹೇಳಿದ.

ಸಂಜೆಯ ಮೇಜುವಾನಿಗೆ ಆಗಮಿಸಿದ ಬಹಾದೂರ್ ಖಾನನನ್ನು ಜಾಫರ್ ಹಾರ್ದಿಕವಾಗಿ ಸ್ವಾಗತಿಸಿ, ಅಬ್ದುಲ್ಲನಿಗೆ ಪರಿಚಯ ಮಾಡಿಕೊಟ್ಟ.

ಬಹಾದೂರಖಾನನಿಗೆ ಅತ್ಯಂತ ಪ್ರಿಯವಾಗಿದ್ದುದು ಕುದುರೆಗಳ ವಿಷಯ. ಅಬ್ದುಲ್ಲಾ ಆ ವಿಷಯ ಪ್ರಸ್ತಾಪಿಸಿದ ಕೂಡಲೆ ಬಹಾದೂರ್

ಧಾರಾಳವಾಗಿ ಮಾತನಾಡಲಾರಂಭಿಸಿ, ಅಶ್ವಶಾಸ್ತ್ರದಲ್ಲಿ ತನಗಿದ್ದ ಪರಿಣತ ಮತಿಯನ್ನು ಪ್ರದರ್ಶಿಸಿದ.

ದಾವತ್ ಮುಗಿಯುವಷ್ಟರಲ್ಲಿ ವ್ಯಾಪಾರ ಕುದುರಿದ್ದುದಲ್ಲದೆ, ಬಹಾದೂರ್ ಕುದುರೆಗಳೊಂದಿಗೆ ಹಿಂದೂಸ್ಥಾನಕ್ಕೆ ಬರಲು ಒಪ್ಪಿಕೊಂಡು

"ನಿಮಗೆಷ್ಟು ಕುದುರೆಗಳು ಬೇಕು."

"ಸದ್ಯಕ್ಕೆ ಆರು ಸಾಕು. ಅವುಗಳಲ್ಲಿ ಒಂದು ಶ್ವೇತಾಶ್ವವಾಗಿ, ದೊಡ್ಡ ಪ್ರಮಾಣದ್ದಾಗಿರಬೇಕು – ಸುಲ್ತಾನರ ಖಾಸಾ ಉಪಯೋಗಕ್ಕೆ."

ಬಹಾದೂರ್, ಜಾಫರನ ಕಡೆ ತಿರುಗಿ

"ನಮ್ಮ ಬೆಹ್ರಾಂ ಇವರಿಗೆ ಮೆಚ್ಚಿಗೆಯಾಗಬಹುದು" ಎಂದ.

"ಬೆಹ್ರಾಂ ಭಾರಿ ತುಂಟ. ಅವನು ಮಣಿಯುವುದು ನಿನಗೊಬ್ಬನಿಗೇ– ಸುಲ್ತಾನರನ್ನು ಬೆಹ್ರಾಂ ಕೆಳಗೆ ಕೆಡವಿದರೆ ನಿನ್ನ ಪ್ರಾಣಕ್ಕೇ ಸಂಚಕಾರ ಬಂದೀತು ಬಹಾದೂರ್."

"ಅದಕ್ಕೆ ನೀವು ಹೆದರಬೇಕಾದದ್ದಿಲ್ಲ. ತುಂಟ ಕುದುರೆಗಳನ್ನು ಮಣಿಸುವುದರಲ್ಲಿ ನಮ್ಮ ಸುಲ್ತಾನರು ನಿಸ್ಸೀಮರು."

ಎಂದು ಅಬ್ದುಲ್ಲಾ ಸುಲ್ತಾನರ ಗುಣ ಕಥನಮಾಡಿದ.

"ಬೆಹ್ರಾಂ ಬೆಲೆ ಬಹಳ ಹೆಚ್ಚು."

"ಬೆಲೆಯ ಪ್ರಶ್ನೆಯನ್ನೇ ಮಾಡಬೇಡಿ. ನಮಗೆ ಬೇಕಾಗಿರುವುದು ಅತ್ಯುತ್ತಮ ಮಾಲು."

ಎಂದು ಒಂದು ಥೈಲಿಯನ್ನೆತ್ತಿ ಬಹಾದೂರನ ಕೈಯಲ್ಲಿಟ

"ಇದರಲ್ಲಿ ಸಾವಿರ ಮೊಹರುಗಳಿವೆ. ಕುದುರೆಗಳನ್ನು ಖರೀದಿಮಾಡಿ, ನೀವು ಹೊರಡಲು ಸಿದ್ಧರಾಗಿ. ಹಣ ಸಾಲದೆ ಬಂದರೆ ನನಗೆ ತಿಳಿಸಿ." ಎಂದ.

ಹಣದ ಗಂಟು ಹೊತ್ತುಕೊಂಡು, ಬಹಾದೂರ್ ಹಿರಿಹಿಗ್ಗುತ್ತ ಮನೆಗೆ ಹಿಂದಿರುಗಿದ.

ಅಬ್ದುಲ್ಲಾ, ಅವನ ಪರಿವಾರ ಹೆಚ್ಚುದಿನ ಇಸ್ಲಾಂಬೂಲಿನಲ್ಲಿ ನಿಲ್ಲಲಿಲ್ಲ. ಬಹಾದೂರ್ ಕುದುರೆಗಳೊಂದಿಗೆ ಸಿದ್ಧವಾದೊಡನೆಯೇ, ಅವರೊಂದಿಗೆ ಕಲ್ಬುರ್ಗಿಗೆ ಹಿಂದಿರುಗಿದ.

ಸುಲ್ತಾನ್ ಮುಹಮುದರಿಗೆ ಬಹಾದೂರನ ಪರಿಚಯಮಾಡಿಕೊಡಲು ಅಬ್ದುಲ್ಲಾ ತಡಮಾಡಲಿಲ್ಲ.

ಅಶ್ವಶಾಸ್ತ್ರದಲ್ಲಿ ಬಹಾದೂರನಿಗಿದ್ದ ಪ್ರಾವೀಣ್ಯಕಂಡು ಸುಲ್ತಾನರು ಬೆರಗಾದುದಲ್ಲದೆ ಅವನು ತಂದಿದ್ದ ದಿವ್ಯಾಶ್ವಗಳನ್ನು ಕಂಡು ಸುಪ್ರಸನ್ನರಾದರು. ಬೆಹ್ರಾಮನಂತೂ ಅವರ ಚಿತ್ತವನ್ನೇ ಅಪಹರಿಸಿಬಿಟ್ಟ.

ಸುಲ್ತಾನರು ಬೆಹ್ರಾಮನ ಕೊರಳು ನೇವರಿಸುತ್ತ ಲಗಾಮಿಗೆ ಕೈಹಾಕಿದರು. ಬಹಾದೂರ್ ಹೆದರಿ

"ಬೆಹ್ರಾಂ ಬಲು ತುಂಟ ಸರ್ಕಾರ್. ಸ್ವಲ್ಪ ರೂಢಿಯಾಗುವವರೆಗೆ ಅವನಮೇಲೆ ಸವಾರಿ ಮಾಡದಿರುವುದೇ ಒಳ್ಳೆಯದು" ಎಂದ.

ಸುಲ್ತಾನರು ನಸುನಗುತ್ತ

"ಹಾಗೇನು?"

ಎಂದು ಬೆಹ್ರಾಮನ ಕೊರಳಿನಮೇಲೆ ಮೃದುವಾಗಿ ಪೆಟ್ಟುಕೊಟ್ಟು, ಲಗಾಮನ್ನು ಹಿಡಿದು ಚಂಗನೆ ಹಾರಿ ಕುದುರೆಯಮೇಲೆ ಕುಳಿತರು.

ಬೆಹ್ರಾಮ್ ನಾಗಾಲೋಟದಲ್ಲಿ ಓಡಿತು.

ಕ್ಷಣಾರ್ಧದಲ್ಲಿ ಸುಲ್ತಾನರು, ಅಶ್ವ ಇಬ್ಬರೂ ಅದೃಶ್ಯರಾದುದನ್ನು ಕಂಡು ಅಬ್ದುಲ್ಲಾ ಗಡಗಡನೆ ನಡುಗಿ

"ಏನು ಮಾಡಿಬಿಟ್ಟೆ ಬಹಾದೂರ್" ಎಂದು ಚೀರಿದ.

"ನಾನೇನುಮಾಡಲಿ ಅಬ್ದುಲ್ಲಾ. ಖಾವಂದರಿಗೆ ಸೂಚನೆ ಕೊಟ್ಟೆ- ಅವರು ನನ್ನ ಮಾತು ಕೇಳಲಿಲ್ಲ."

"ಈಗ ಸುಲ್ತಾನರಿಗೆ ಅಪಘಾತವಾದರೇನು ಗತಿ?"

"ಸುಲ್ತಾನರು ಉತ್ತಮ ಅಶ್ವಾರೋಹಿಗಳ ಹಾಗೆ ಕಾಣುತ್ತಾರೆ."

ಇಬ್ಬರೂ ಕೊರಾನಿನಲ್ಲಿದ್ದ ಅಲ್ಲಾನ ಎಲ್ಲ ದಿವ್ಯನಾಮಗಳನ್ನೂ ಜಪಿಸುತ್ತ ಕುಳಿತರು.

ಮುಕ್ಕಾಲು ಗಂಟೆ ಕಳೆದಿರಬಹುದು. ದೂರದಲ್ಲಿ ಕುದುರೆಗಳ ಖರಪುಟ ಕೇಳಿಸಿತು.

ಅಬ್ದುಲ್ಲಾ, ಬಹಾದೂರ್ ಬೆಕ್ಕಸ ಬೆರಗಾಗಿ ನೋಡುತ್ತಾ ನಿಂತಿರುವಂತೆ ಅಶ್ವಾರೋಹಿಗಳಾದ ಸುಲ್ತಾನರು ಹಿಂದಿರುಗಿದರು. ಬಹಾದೂರ್ ಓಡಿಹೋಗಿ ಲಗಾಮು ಹಿಡಿದುಕೊಳ್ಳಲು ಸುಲ್ತಾನರು ಕೆಳಗೆ ಹಾರಿ

"ಬೆಹ್ರಾಂ ಸೊಗಸಾದ ಕುದುರೆ ಬಹಾದೂರ್. ನಿನ್ನ ಆಯ್ಕೆ ಕಂಡು ನಮಗೆ ಬಹಳ ಸಂತೋಷವಾಗಿದೆ" ಎಂದರು.

"ಬೆಹ್ರಾಂ ಏನೂ ತುಂಟತನ ಮಾಡಲಿಲ್ಲವೇ?"

"ಸ್ವಲ್ಪ ಹೊತ್ತು ಮಾಡಿತು. ಮುಂಗಾಲುಗಳನ್ನು ಮೇಲಕ್ಕೆತ್ತಿ ನಮ್ಮನ್ನು ಕೆಳಗೆ ಕೆಡವಲು ಯತ್ನಿಸಿತು. ನಾವು ಸಮತೂಕ ಕಳೆದುಕೊಳ್ಳದೆ ಬೆಹ್ರಾಮನ ಬೆನ್ನಿಗೆ ಆತು ಕುಳಿತೆವು. ಮೂರು ನಾಲ್ಕುಸಲ ಪ್ರಯತ್ನಿಸಿ ಬೆಹ್ರಾಮ್ ಪ್ರಶಾಂತವಾಯಿತು. ಅಲ್ಲಿಂದ ಮುಂದೆ ನಾವೂ ಬೆಹ್ರಾಂ ಪರಮಸ್ನೇಹಿತರಾದೆವು" ಎಂದರು.

ಕುದುರೆಗಳ ಯೋಗಕ್ಷೇಮ ನೋಡಿಕೊಳ್ಳುತ್ತ ಬಹಾದೂರ್ ಅರಮನೆಯ ಪ್ರಾಂಗಣದಲ್ಲಿ ನಿಂತ.

ಅಬ್ದುಲ್ಲಾ ಸುಲ್ತಾನರನ್ನು ಅನುಸರಿಸಿ ಅರಮನೆ ಪ್ರವೇಶಿಸಿದ.

ಸುಲ್ತಾನರು ತಮ್ಮ ಖಾಸಮಹಲಿನಲ್ಲಿದ್ದ ಸುಪ್ಪತ್ತಿಗೆಯ ಮೇಲೆ ಪವಡಿಸಿದರು.

ಒಬ್ಬ ಸೇವಿಕೆ ಸುಲ್ತಾನರಿಗೆ ಮದ್ಯ ತಂದಿತ್ತಳು. ಇನ್ನೊಬ್ಬಳು ಗುಡುಗುಡಿಯ ನಳವನ್ನು ಸುಲ್ತಾನರ ಕೈಗಿತ್ತಳು.

ಸುಲ್ತಾನರು ನಳ ಸೇದುತ್ತ, ಅದರ ಮಧುರ ಧೂಪದಲ್ಲಿ ಮಗ್ನರಾಗಿ

"ಆರು ಕುದುರೆ ಖರೀದಿ ಮಾಡುವುದಕ್ಕೆ ಹನ್ನೆರಡು ತಿಂಗಳು ಊರು ಬಿಟ್ಟು ಹೋದೆಯಾ ಅಬ್ದುಲ್ಲಾ."

"ಬೆಹ್ರಾಮನನ್ನು ಖಾವಂದರು ಮೆಚ್ಚಿಕೊಂಡರು."

"ಮೆಚ್ಚಿಕೊಂಡೆ – ಅದು ಜಾತ್ಯಶ್ವವೆನ್ನುವುದರಲ್ಲಿ ಸಂದೇಹವಿಲ್ಲ."

"ಎಂಥ ಧೂರ್ತಪಶುವನ್ನು ಹೇಗೆ ಮಣಿಸಿಬಿಟ್ಟಿರಿ ಹುಜೂರ್."

ಸುಲ್ತಾನರು ನಗುತ್ತಾ, ನಳದಿಂದ ಹೊಗೆಯೆಳೆದುಕೊಂಡು, ಬಾಯಿಂದ ಬಿಡುತ್ತ,

"ಎಲ್ಲ ಪಶುಗಳನ್ನೂ ನಾನು ಮಣಿಸಬಲ್ಲೆ – ನಿನ್ನನ್ನೇ ನಾನು ಮಣಿಸಲಾರದಾಗಿದ್ದೇನೆ. ಈಗ ಎಂದು ನೀನಂದರೆ, ನಿನಗೆ ಆರು ತಿಂಗಳು ವಾಯಿದೆ ಕೊಡಬೇಕಾಗಿದೆ."

ಅಬ್ದುಲ್ಲಾ ಸುಲ್ತಾನರ ಸಮೀಪಕ್ಕೆ ಬಂದು ಪಿಸುಮಾತಿನಲ್ಲಿ

"ಇರಾಣದಿಂದ ನಾನು ಕಳಿಸಿದ ಮಾಲು ಬರಲಿಲ್ಲವೇ ಖಾವಂದ್."

"ಬಂತು – ಮಾಮೂಲಿ ಮಾಲು. ಅವುಗಳನ್ನು ನನ್ನ ಸರದಾರರಿಗೆ ಹಂಚಿಬಿಟ್ಟೆ—ನಮಗೇನು ತಂದೆಯೋ ಬೇವಕೂಫ್."

ಅಬ್ದುಲ್ಲಾ ನೆಲಮುಟ್ಟಿ ಸಲಾಮು ಮಾಡುತ್ತಾ

"ಇಸ್ತಾಂಬೂಲಿನ ಚಂದ್ರನನ್ನೇ ತಂದಿದ್ದೇನೆ ಹುಜೂರ್."

ಮೇಲಕ್ಕೆದ್ದು ಕುಳಿತ ಸುಲ್ತಾನರು,

"ಎಲ್ಲಿ – ಎಲ್ಲಿ ಬೇಗ ಬರಮಾಡು" ಎಂದರು.

"ಗುಲಾಮನ ಮಾತು ತಾವು ಸ್ವಲ್ಪ ಲಾಲಿಸಬೇಕು ಹುಜೂರ್. ಆತುರಪಟ್ಟರೆ ಕೆಲಸ ಕೆಟ್ಟುಹೋಗುತ್ತದೆ."

ಎಂದು ಬಹಾದೂರ್, ಸುರೈಯ್ಯಳ ಚರಿತ್ರೆ ವಿವರಿಸಿ, ಅವರನ್ನು ಕರೆದು ತಂದ ಬಗೆಯನ್ನು ಬಣ್ಣಿಸಿದ. ಪರಮಸಂತೃಪ್ತರಾದ ಸುಲ್ತಾನರು,

"ನೀನು ಹೇಳುವಷ್ಟು ಅವಳು ಸುಂದರಿಯೇ ?" ಎಂದರು.

"ಅವಳನ್ನು ನೋಡುವುದಕ್ಕೆ ಎರಡು ಕಣ್ಣುಗಳು ಸಾಲದು ಹುಜೂರ್."

"ಗುಲಾಮ, ಅವಳಮೇಲೆ ನೀನು ಕಣ್ಣು ಹಾಕೀಯಾ – ಜೋಕೆ."

"ಉಂಟೇ ಜಹಾಪನಾ – ಅವಳನ್ನು ನಾನು ತಮ್ಮ ಕಣ್ಣುಗಳಿಂದಲೇ ನೋಡಿದ್ದು."

"ನಾನು ಅವಳನ್ನು ನೋಡುವುದು ಯಾವಾಗ ?"

"ಬಹಾದೂರನ ವ್ಯವಸ್ಥೆಯಾದಮೇಲೆ"

"ಈಗ ಅವನೆಲ್ಲಿದ್ದಾನೆ ?"

"ದಿಲ್‌ಕುಷ್ ಮಹಲಿನಲ್ಲಿ ಅವನ ಬಿಡಾರ ಏರ್ಪಡಿಸಿದ್ದೇನೆ."

"ಕುದುರೆಗಳಿಗೆ ಕೊಡಬೇಕಾದ ಹಣವಿತ್ತು ಅವನನ್ನು ಹೋಗು ಎಂದು ಹೇಳು."

"ಹೋಗು ಎಂದರೆ ಅವನು ಸುರೈಯ್ಯನನ್ನೂ ಜತೆಯಲ್ಲಿ ಕರೆದುಕೊಂಡು ಹೋಗುತ್ತಾನೆ."

"ಸುರೈಯ್ಯ ರಾಜಧಾನಿಯಲ್ಲೇ ಇದ್ದಾಳೆ ಎಂದುಕೊಂಡೇ ನಾನು ತೃಪ್ತಿಪಟ್ಟುಕೊಳ್ಳಬೇಕೇ ?"

"ಇಲ್ಲ ಹುಜೂರ್ – ಬಹಾದೂರನಿಗೆ ಇಲ್ಲೇ ಕೆಲಸ ಕೊಡಿಸಿ, ಅವನನ್ನು ಉಳಿಸಿಕೊಳ್ಳಬೇಕೆಂದಿದ್ದೇನೆ."

"ಬಹಾದೂರನಿಗೆ ಕೆಲಸವಾದರೆ ಏನಾಯಿತೋ ಮೂರ್ಖ – ನಮ್ಮ ಕೆಲಸವಾದ ಹಾಗಾಯಿತೇ ?"

"ಇಸ್ತಾಂಬೂಲ್ ಬಿಡಿಸಿ ಕರೆದುಕೊಂಡು ಬಂದಿದ್ದೇನೆ. ಖಾವಂದರ ಮನಸ್ಸಿಗೆ ತೃಪ್ತಿಯನ್ನುಂಟುಮಾಡುವುದೇ ನನ್ನ ಪರಮಧರ್ಮವಲ್ಲವೇ ?"

"ಅವಳನ್ನು ನಾನು ನೋಡುವುದು ಯಾವಾಗ ?"

"ಸದ್ಯದಲ್ಲೇ – ಹುಜೂರರು ಮಾರುವೇಷದಲ್ಲಿ ಬರಬೇಕಾಗುತ್ತದೆ."

"ಯಾವ ವೇಷ ಬೇಕಾದರೂ ಹಾಕುವುದಕ್ಕೆ ಸಿದ್ಧವಾಗಿದ್ದೇನೆ

ಅಬ್ದುಲ್ಲಾ – ಬಹಾದೂರ್ ನನ್ನ ಹಾದಿಯಲ್ಲಿ ಮುಳ್ಳಾಗದಂತೆ ನೋಡಿ ಕೊಳ್ಳುವುದು ನಿನ್ನ ಭಾರ."

"ಬಹಾದೂರ್ ಲಕ್ಷಣವಂತ, ವೀರ. ಸುರೈಯ್ಯಾ ಗಂಡನ ಬಗ್ಗೆ ಪರಮ ಪ್ರೀತಿ ತಳೆದಿದ್ದಾಳೆ. ನನ್ನ ಕೆಲಸ ಶ್ರಮಸಾಧ್ಯವಾದುದು ಹುಜೂರ್. ತಾವು ಸಮಾಧಾನ ಚಿತ್ತದಿಂದ ಇರದಿದ್ದರೆ ಕೆಲಸ ಕೆಟ್ಟುಹೋಗುತ್ತದೆ."

"ನಿನ್ನ ಮಾತು ಚಾ – ಚೂ ತಪ್ಪುವುದಿಲ್ಲ ಅಬ್ದುಲ್ಲಾ. ನಿನಗೆ ಹೇಗೆ ಸೂಕ್ತಕಾಣುತ್ತದೋ ಹಾಗೆ ಮಾಡು. ವೃಥಾ ಕಾಲಹರಣವಾಗದಿರಲಿ ಅಷ್ಟೇ. ಸುರೈಯ್ಯಳನ್ನು ಪಳಗಿಸುವುದಕ್ಕೆ ಗುಲ್‌ಷನಳನ್ನು ಕರೆದುಕೊಂಡು ಹೋಗು."

"ಆ ಯೋಚನೆಯನ್ನೂ ಮಾಡಿದೆ ಹುಜೂರ್. ಕಾಲ ಸನ್ನಿಹಿತ ವಾದಾಗ ಗುಲ್‌ಷನಳ ನೆರವು ಪಡೆಯುತ್ತೇನೆ."

ಎಂದು ದೊರೆಗೆ ಅಭಿವಂದಿಸಿ ಗೃಹಾಭಿಮುಖನಾದ.

ಸುಲ್ತಾನನಿಗೆ ಸುರೈಯ್ಯಳ ದರ್ಶನ ಮಾಡಿಸುವುದು ಹೇಗೆಂಬುದೇ ಅಬ್ದುಲ್ಲನಿಗೆ ದೊಡ್ಡ ಚಿಂತೆಯಾಯಿತು. ಯೋಚನೆಯಲ್ಲಿ ಮೂರು ದಿನ ಗಳು ಕಳೆದುಹೋದುವು.

ನಾಲ್ಕನೆಯ ದಿನ ಅರಮನೆಯ ಅಶ್ವರಕ್ಷಕ ಕಾಸಿಮನನ್ನು ಕರೆದು ಕೊಂಡು ಅಬ್ದುಲ್ಲಾ ದಿಲ್‌ಕುಷ್ ಮಹಲಿಗೆ ಬಂದ.

ಅಬ್ದುಲ್ಲಾನನ್ನು ಗೌರವದಿಂದ ಸ್ವಾಗತಿಸಿದ ಸುರೈಯ್ಯಾ, ಅವಕುಂಠನ ಧರಿಸಿ ಒಳಬಾಗಿಲಲ್ಲೇ ನಿಂತಳು.

ಕಾಸಿಮನೊಂದಿಗೆ ಹಜಾರದಲ್ಲಿ ಕುಳಿತ ಅಬ್ದುಲ್ಲಾ

"ಬಹಾದೂರ್ ಇಲ್ಲವೇ ಸುರೈಯ್ಯಾ" ಎಂದ.

"ಇಲ್ಲ. ಹುಜೂರರ ಅಪ್ಪಣೆಯಾಗಿದೆ ಎಂದು ಹೇಳಿ ಹೋದರು."

"ಹುಜೂರರೇ ಇವರನ್ನೂ ಕಳಿಸಿಕೊಟ್ಟಿದ್ದಾರೆ – ಬಹಾದೂರನನ್ನು ಕಾಣಲು."

"ಏನು ಸಮಾಚಾರ."

"ಇಲ್ಲಿ ಬಾ – ಕಾಸೀಂಖಾನ್ ನನ್ನ ಸಮೀಪದ ಬಂಧು, ಅವನ ಮುಂದೆ ನೀನು ನಾಚಬೇಕಾದದ್ದಿಲ್ಲ."

ಸುರೈಯ್ಯಾ ಹೊರಗೆ ಬಂದು ನಮ್ರತೆಯಿಂದ ಕಾಸೀಮನಿಗೆ ಸಲಾಮು ಮಾಡಿ ಅಬ್ದುಲ್ಲಾನ ಸಮೀಪದಲ್ಲಿ ನಿಂತಳು.

"ಹುಜೂರರಿಗೆ ಬಹಾದೂರಖಾನನ ಮೇಲೆ ತುಂಬಾ ವಿಶ್ವಾಸ ಹುಟ್ಟಿದೆ

ಸುರೈಯ್ಯಾ. ಬಹಾದೂರ್ ಕಾಸೀಂನ ಜತೆಯಲ್ಲಿದ್ದುಕೊಂಡು ಸೈನ್ಯದ ಅಶ್ವಗಳ ಯೋಗಕ್ಷೇಮ ನೋಡಿಕೊಳ್ಳಬೇಕೆಂದು ಹುಜೂರರು ಬಯಸುತ್ತಾರೆ. ಬಹಾದೂರಖಾನನನ್ನು ಒಪ್ಪಿಸಲು ನನ್ನನ್ನೂ ಕಾಸೀಂ ಖಾನನನ್ನೂ ಕಳಿಸಿ ಕೊಟ್ಟಿದ್ದಾರೆ."

"ನಾನೇನು ಹೇಳಲಿ ದಾದಾ. ಈ ವಿಷಯ ನೀವು ಅವರೊಂದಿಗೇ ಮಾತನಾಡಬೇಕು."

"ಇಸ್ತಾಂಬೂಲಿಗೆ ಹಿಂದಿರುಗಲು ನೀನು ಇಚ್ಛಿಸುತ್ತಿರುವೆಯಾ ?"

"ಇಸ್ತಾಂಬೂಲಿನಲ್ಲಿ ನಾವು ಪಡುತ್ತಿದ್ದ ಸುಖ ಅಷ್ಟರಲ್ಲಿಯೇ ಇದೆ. ಸುಲ್ತಾನರಲ್ಲಿ ಒಳ್ಳೆಯ ಕೆಲಸ ಸಿಕ್ಕಿ, ಕೈತುಂಬ ಸಂಬಳ ಬರುವುದಾದರೆ ಇಲ್ಲೇ ಇರಲು ನಾನು ಇಚ್ಛಿಸುತ್ತೇನೆ. ಅವರನ್ನು ಒಪ್ಪಿಸುವ ಭಾರ ನಿಮ್ಮದು."

"ಸಂಬಳ ಸಾರಿಗೆಯ ವಿಷಯ ನೀನು ಯೋಚಿಸಬೇಕಾಗಿಲ್ಲ ಸುರೈಯ್ಯಾ-ಬಹಮನಿ ಸುಲ್ತಾನರಂಥ ಕೊಡುಗೈ ದೊರೆ ಜಗತ್ತಿನಲ್ಲೇ ಹುಟ್ಟಿಲ್ಲ. – ನೀನು ಈ ವಿಷಯ ಬಹಾದೂರನಲ್ಲಿ ಪ್ರಸ್ತಾಪಿಸಿರು. ನಾಳೆ ನಾನು ಅವನನ್ನು ಕಾಣುತ್ತೇನೆ."

ಎಂದು ಹೇಳಿ ಕಾಸೀಮನೊಂದಿಗೆ ಅಬ್ದುಲ್ಲಾ ಹೊರಬಿದ್ದ.

ದಿಲ್‌ಕುಷ್ ಮಹಲಿನ ಸುತ್ತ ಬಳಸಿದ್ದ ಅಡ್ಡರಸ್ತೆಗಳ ಹಾಯ್ದು ಇಬ್ಬರೂ ಅರಮನೆಗೆ ಸಮೀಪಗತರಾದರು. ಕಾಸಿಮ್ ಛದ್ಮವೇಷ ತೆಗೆದು, ಅಬ್ದುಲ್ಲಾನ ಕೈಗಿತ್ತು

"ಸುರೈಯ್ಯಳನ್ನು ಬೇಗ ನನ್ನವಳನ್ನಾಗಿ ಮಾಡು ಅಬ್ದುಲ್ಲಾ – ಆ ರೂಪರಾಶಿ ನನ್ನವಳಾಗದೆ ನಾನು ಬದುಕುವುದೇ ದುಸ್ತರವಾಗುತ್ತದೆ. ನೀನು ಬಹಳ ದಿವಸಗಳಿಂದ ಬಯಸುತ್ತಿರುವ ಸರ್ದಾರ್‌ಪದವಿ ನಮ್ಮ ಸಖ್ಯವಾದ ದಿನವೇ ನಿನಗೆ ಕೊಡುತ್ತೇನೆ."

"ಅಪ್ಪಣೆ ಹುಜೂರ್. ಹುಲಿಯೊಂದಿಗೆ ನಾನು ಸರಸವಾಡಬೇಕಾಗಿದೆ. ಆದ್ದರಿಂದಲೇ ಇಷ್ಟು ಎಚ್ಚರಿಕೆ ವಹಿಸುತ್ತಿದ್ದೇನೆ – ಕೆಲಸ ಸಾಧಿಸದೆ ಬಿಡುವುದಿಲ್ಲ ಹುಜೂರ್. ನಿಮ್ಮ ಗುಲಾಮ ಎಂದೆಂದಿಗೂ ನಮ್ಮಕ್ ಹರಾಮ್ ಆಗುವುದಿಲ್ಲ."

"ಗುಲ್‌ಷನ್ ಬೇಗಂ ಸಂಧಾನಚತುರೆ. ಅವಳ ಸಹಾಯ ನೀನು

ತೆಗೆದುಕೊಳ್ಳಬಹುದು. ಮೊದಲು ಗುಲ್‌ಷನ್‌ಗೂ ಸುರೈಯ್ಯಾಳಿಗೂ ಪರಿಚಯ ಮಾಡಿಸು."

"ಅಪ್ಪಣೆ ಹುಜೂರ್"

ಎಂದು ಅಬ್ದುಲ್ಲಾ ಶಿರಬಾಗಿಸಿದ

೯

ಸುರೈಯ್ಯಳ ರೂಪಲಾವಣ್ಯ ಕಂಡು ಮಾರುಹೋಗಿದ್ದ ಸುಲ್ತಾನರಿಗೆ ನಿದ್ರಾಹಾರಗಳು ಬೇಡವಾದವು. ಎದ್ದರೆ, ಕುಳಿತರೆ, ನಿಂತರೆ ಅವರಿಗೆ ಸುರೈಯ್ಯಳ ಧ್ಯಾನ. ಕಾರಿರುಳಿನಂತೆ ಆ ಬೊಗಸೆಗಂಗಳ ಕಾಮಿನಿಯ ಮನ ಮೋಹಕ ರೂಪ ಸುಲ್ತಾನರನ್ನು ಒಂದೇ ಸಮನಾಗಿ ಕಾಡಲಾರಂಭಿಸಿತು.

ಸುಲ್ತಾನರ ಅಸ್ವಸ್ಥತೆಯ ಕಾರಣವರಿಯದೆ ಮಂತ್ರಿವರ್ಗದವರು ಚಿಂತಾಗ್ರಸ್ತರಾದರು.

ಸುಲ್ತಾನರ ಬಳಿಗೆ ಯಾರೂ ಸುಳಿಯುವಂತಿರಲಿಲ್ಲ. ಸದಾಕಾಲವೂ ಪಾನದಲ್ಲಿ ಮುಳುಗಿದ್ದ ಸುಲ್ತಾನರನ್ನು ಗುಲ್‌ಷನ್ ಒಬ್ಬಳಲ್ಲದೆ ಯಾರೂ ಮಾತನಾಡಿಸಲು ಧೈರ್ಯವಿರಲಿಲ್ಲ.

ಕಂಠಪೂರ್ತಿ ಕುಡಿದಿದ್ದ ಸುಲ್ತಾನರು

"ಇನ್ನಷ್ಟು ಮದ್ಯ ಕೊಡು ಗುಲ್‌ಷನ್"

ಎಂದು ಬೇಡುತ್ತಿದ್ದರು. ನಿರ್ವಾಹವಿಲ್ಲದೆ ಗುಲ್‌ಷನ್ ಅವರ ಬೇಡಿಕೆ ಪೂರೈಸುತ್ತಿದ್ದಳು.

ಗುಲ್‌ಷನಳ ನಿಷ್ಕಲ್ಮಷ ಸ್ನೇಹ, ಪ್ರೇಮ ಕಂಡು ಒಮ್ಮೊಮ್ಮೆ ಸುಲ್ತಾನರಿಗೆ ನಾಚಿಕೆಯಾಗುತ್ತಿತ್ತು.

ಒಂದು ದಿನ ರಾತ್ರಿ ಸುಲ್ತಾನರು ಮೇರೆ ಮೀರಿ ಕುಡಿದಿದ್ದಾರೆ. ತುಂಬಿದ್ದ ಉದರಕ್ಕೆ ಮತ್ತಷ್ಟು ಮದ್ಯ ಸುರಿಯುವ ಅವರ ಪ್ರಯತ್ನ ನಿಷ್ಫಲವಾಗುತ್ತಿದೆ.

ತನ್ನ ಅವಸ್ಥೆ ನೋಡಿಕೊಂಡ ಸುಲ್ತಾನರ ಕಣ್ಣುಗಳಲ್ಲಿ ನೀರೂರಿತು. ಗುಲ್‌ಷನಳು ಸುಲ್ತಾನರ ತಲೆಯನ್ನು ತನ್ನ ತೊಡೆಯ ಮೇಲಿಟ್ಟುಕೊಂಡು ಸಮಾಧಾನ ಪಡಿಸಿದಳು.

" ನಾನು ಪಾಪಿ ಗುಲ್‌ಷನ್–ಧರ್ಮ ಕರ್ತವ್ಯ ಎಲ್ಲವನ್ನೂ ಕಡೆಗಾಣಿಸಿ ಫರ್ಹಾದನಂತೆ ಹುಚ್ಚನಾಗಿದ್ದೇನೆ."

" ನಾನು ಬಲ್ಲೆ ಷಹನ್‌ಷಹಾ."

" ನನ್ನ ಷಿರೀನಳನ್ನು ನೋಡಿದ್ದೀಯಾ ಗುಲ್."

" ನೋಡಿದ್ದೇನೆ."

" ಹೇಗಿದ್ದಾಳೆ."

" ಫಿರ್ದೌಸಿಯ ಕಾವ್ಯಶಕ್ತಿ ನನ್ನಲ್ಲಿದ್ದರೆ ಅವಳು ಹೇಗಿದ್ದಾಳೆಂದು ಹೇಳುತ್ತಿದ್ದೆ."

" ಸುರೈಯ್ಯಾ ನನ್ನವಳಾಗದೆ ನಾನುಳಿಯಲಾರೆ ಗುಲ್."

" ಜಹಾಪನಾ, ಅಲಭ್ಯ ವಸ್ತುವನ್ನು ಬಯಸಿ ಏಕೆ ವೃಥಾ ಬವಣೆಗೀಡಾಗಿರುವಿರಿ. ಜನಾನಾದಲ್ಲಿ ಸುಂದರಿಯರಿಗೆ ಕ್ಷಾಮವೇ? ಸುರೈಯ್ಯಾ, ಬಹಾದೂರನ ಅನ್ಯೋನ್ಯದಾಂಪತ್ಯದ ಮಧ್ಯೆ ಝೂಂಝೂಮಾರುತವೆಬ್ಬಿಸುವುದು ತರವೇ? ನೀವು ಸುಲ್ತಾನರು – ಯಾವ ಊರಿನಿಂದ ಬೇಕಾದರೂ ಕಣ್ಮನಗಳಿಗೊಪ್ಪುವ ಸುಂದರಿಯರನ್ನು ಕರೆತರಿಸಬಲ್ಲಿರಿ. ಬಹಾದೂರ್ ಬಡವ – ಅವನ ಏಕಮಾತ್ರ ಆಸ್ತಿ ಸುರೈಯ್ಯ!"

ಸುಲ್ತಾನರ ಮುಖ ಕಳೆಗುಂದಿತು. ಅವರು ಹುಬ್ಬುಗಂಟುಹಾಕಿಕೊಂಡು,

" ಸಾಮಾನ್ಯರಂತೆ ನೀನೂ ಈ ಒಣ ಉಪದೇಶಮಾಡುತ್ತಿರುವೆಯಲ್ಲಾ ಗುಲ್. ನಿನ್ನ ಉಪದೇಶ ಕೇಳುವುದಕ್ಕೆ ನಾನು ನಿನ್ನನ್ನಿಲ್ಲಿ ಬರಮಾಡಿದೆನೇ?"

" ದಾಸಿಯೇನು ಮಾಡಬೇಕು ಜಹಾಪನಾ."

" ಸುರೈಯ್ಯಳ ಮನವೊಲಿಸಬೇಕು."

" ಬಹಾದೂರನನ್ನೇನು ಮಾಡುವಿರಿ?"

" ಅವನು ಹೊರುವಷ್ಟು ಮೊಹರುಗಳನ್ನು, ವಜ್ರ ವೈಢೂರ್ಯಗಳನ್ನಿತ್ತು ಊರಿಗೆ ಕಳಿಸಿಕೊಡುತ್ತೇನೆ."

" ಸುರೈಯ್ಯಳನ್ನು ಬಿಟ್ಟು ಹೋಗುವುದಕ್ಕೆ ಅವನು ಸಿದ್ಧನಾಗಬೇಕಲ್ಲ!"

" ಸಿದ್ಧನಾಗಲೇ ಬೇಕು."

" ಇದು ಷಹನ್‌ಷಹಾ ಅವರ ಹುಕುಮೇ?"

"ಹೌದು – ಅರೆಕ್ಷಣದಲ್ಲಿ ನಾನು ನನ್ನ ಮನೋವಾಂಛಿತವನ್ನು ಪೂರೈಸಿಕೊಳ್ಳಬಲ್ಲೆ ಗುಲ್. ಬಹಾದೂರನನ್ನು ನಿವಾರಿಸುವುದು ನನಗೆ ದೊಡ್ಡ ವಿಷಯವಾಗಿಲ್ಲ. ಬಲವದ್ಬಂಧನದಿಂದ ಸುರೈಯ್ಯಳನ್ನು ಒಲಿಸಿಕೊಳ್ಳಲು ನನಗಿಷ್ಟವಿಲ್ಲ – ಆ ರೂಪರಾಣಿ ನಗುನಗುತ್ತ ನನ್ನ ತೋಳತೆಕ್ಕೆ ಸೇರಬೇಕು. ನಿರಪರಾಧಿಯಾದ ಬಹಾದೂರನನ್ನು ಪೀಡಿಸಲು ನನ್ನ ಮನಸ್ಸು ಒಪ್ಪದಾಗಿದೆ. ಗುಲ್ – ನನ್ನ ಮಾತು ಕೇಳುವೆಯಾ!"

"ಹೇಳಿ ಹುಜೂರ್."

"ಅಬ್ದುಲ್ಲಾ ಶುದ್ಧ ಕತ್ತೆ – ಈ ಸನ್ನಿವೇಶದ ಸೂಕ್ಷ್ಮಾತಿಸೂಕ್ಷ್ಮತೆ ಅವನಿಗರ್ಥವಾಗುವುದಿಲ್ಲ. ಬಹಾದೂರನಿಗಾಗಲಿ ಸುರೈಯ್ಯಳಿಗಾಗಲಿ ಮನಃ ಕ್ಲೇಶವಾಗದಂತೆ ಸಂದರ್ಭೋಚಿತವಾಗಿ ನೀನು ವರ್ತಿಸಬಲ್ಲೆ – ನಿನಗೂ ಸುರೈಯ್ಯಳಿಗೂ ಹೇಗಿದೆ ?"

"ಚೆನ್ನಾಗಿದೆ. ರಾಜಧಾನಿಯಲ್ಲಿ ಯಾರ ಪರಿಚಯವೂ ಅವಳಿಗಿಲ್ಲ. ನಾನೊಬ್ಬಳೇ ಅವಳ ಗೆಳತಿ."

"ಸುರೈಯ್ಯಳನ್ನು ಒಲಿಸು ಗುಲ್‌ಷನ್ – ನಿನ್ನೊಬ್ಬಳ ಪ್ರಾರ್ಥನೆಗಾಗಿಯೇ ಒಂದು ಮಸೀದಿ ಕಟ್ಟಿಸಿಕೊಡುತ್ತೇನೆ."

"ಪ್ರಯತ್ನಿಸುತ್ತೇನೆ ಹುಜೂರ್. ಗುಲಾಮಳು ಕೃತಕೃತ್ಯಳಾಗದಿದ್ದರೆ ಅವಳ ಮೇಲೆ ಆಗ್ರಹಗೊಳ್ಳಬೇಡಿ."

"ಎಂದಿಗೂ ನೀನೇ ನನ್ನ ಹೃದಯಸಖಿ ಗುಲ್‌ಷನ್ – ರಾಜ್ಯ ಕಾರಣದ ಹೊರೆಯಿಂದ ಜಗ್ಗುತ್ತಿರುವ ನನ್ನನ್ನು ಹಿಡಿದು ಮೇಲಕ್ಕೆತ್ತಿರುವುದು ನಿನ್ನ ನಿಷ್ಕಲ್ಮಷ ಪ್ರೇಮ – ಗುಲ್‌ಷನ್, ಜನಾನಾ ತುಂಬ ಬೇಗಂಗಳಿದ್ದಾರೆ, ರಾಜ್ಯದ ತುಂಬ ಸರದಾರರು, ವಜೀರರಿದ್ದಾರೆ, ನನ್ನ ಕುಡಿಗಣ್ಣು ನೋಟಕ್ಕೆ ಬೆದರುವ ಪ್ರಜಾವರ್ಗವಿದೆ. ಆದರೂ ನಾನು ಏಕಾಂಗಿ ಗುಲ್‌ಷನ್. ರಾಜ್ಯಲೋಲುಪರಾದ ಬೇಗಂಗಳು ತಮ್ಮ ತಮ್ಮ ಮಕ್ಕಳಿಗೆ ರಾಜ್ಯಾಧಿಕಾರ ದೊರಕಿಸಲು ಸಂಚುಮಾಡುತ್ತಿದ್ದಾರೆ. ಇವರೆಲ್ಲಾ ಸುಲ್ತಾನ್ ಮಹಮುದರನ್ನು ಪ್ರೀತಿಸುತ್ತಾರೆಯೇ ?–ಗೌರವಿಸುತ್ತಾರೆ–ಸುಲ್ತಾನರ ಆಜ್ಞೆಗೆ ಬದ್ಧರಾಗಿ ನಡೆದುಕೊಳ್ಳುತ್ತಾರೆ. ಸುಲ್ತಾನ್ ಮಹಮುದನೂ ಮನುಷ್ಯನಲ್ಲವೇ ಗುಲ್‌ಷನ್. ಅವನೂ ನಿರ್ವ್ಯಾಜ ಅಂತಃಕರಣ ಬಯಸುವುದಿಲ್ಲವೇ–ನನ್ನ ಒಬ್ಬ ಸಾಮಾನ್ಯ ಪ್ರಜೆಗಿರುವ ಸುಖ – ಶಾಂತಿ ನನಗಿದೆಯೆಂದು ಭಾವಿಸಿರುವೆಯಾ ?

ವಿಜಯನಗರದ ಸೈತಾನರು ನನ್ನನ್ನು ಹಗಲಿರುಳೂ ಕಾಡುತ್ತಿದ್ದಾರೆ. ಮುಳ್ಳಿನ ಪಲ್ಲಂಕದಲ್ಲಿ ಪವಡಿಸಿರುವ ನಾನು ಒಮ್ಮೊಮ್ಮೆ ಮೆತ್ತೆಗಿನ ದಿಂಬು ಬೇಕೆಂದು ಬಯಸಿದರೆ ತಪ್ಪೇ ಗುಲ್‌ಷನ್."

ಸುಲ್ತಾನರ ವಾದವನ್ನು ಒಪ್ಪಲು ಗುಲ್‌ಷನ್ ಸಿದ್ಧಳಾಗಿರಲಿಲ್ಲ; ಅದಕ್ಕೆ ಪ್ರತಿ ಹೇಳುವ ಧೈರ್ಯವೂ ಇರಲಿಲ್ಲ.

ಪಾನಪ್ರಮತ್ತರಾಗಿದ್ದ ಸುಲ್ತಾನರನ್ನು ಮೆಲ್ಲನೆ ಪಲ್ಲಂಕದ ಮೇಲೆ ಮಲಗಿಸಿ ಗುಲ್‌ಷನ್ ನಿಷ್ಕ್ರಮಿಸಿದಳು.

## ೧೦

ಗುಲ್‌ಷನ್ ಅಪ್ರಿಯವಾದ ಕೆಲಸವೊಂದನ್ನು ನಿರ್ವಹಿಸುವ ಹೊಣೆ ಹೊತ್ತಿದ್ದಳು. ಈ ಪ್ರಸಂಗದಿಂದ ಯಾರಿಗೂ ಹಿಂಸೆಯಾಗಬಾರದೆಂಬುದು ಸ್ವಭಾವತಃ ಸುಹೃದಯಿಯಾದ ಗುಲ್‌ಷನಳ ಆಕಾಂಕ್ಷೆಯಾಗಿತ್ತು.

ಸುರೈಯ್ಯಾ, ಬಹಾದೂರರ ಹಾರ್ದಿಕ ಸಂಬಂಧವನ್ನು ಹತ್ತಿರ ಹತ್ತಿರ ನೋಡುತ್ತ ಬಂದಂತೆ ತನ್ನ ಕಾರ್ಯ ಮುಂದುವರಿಸಲು ಗುಲ್‌ಷನಳಿಗೆ ಧೈರ್ಯವೇ ಸಾಲದಾಗುತ್ತ ಬಂದಿತು.

ಒಂದು ದಿನ ಸುರೈಯ್ಯಳ ಮನೆಯಲ್ಲಿ ಗುಲ್‌ಷನ್ ಅವಳೂ ಮಾತನಾಡುತ್ತ ಕುಳಿತಿದ್ದರು. ಮಾತಿನ ಭರದಲ್ಲಿ ಸುರೈಯ್ಯಾ

"ಸುಲ್ತಾನ್ ಮಹಲಿಗೆ ಕರೆದೊಯ್ದು ಜನಾನಾ ತೋರಿಸುತ್ತೇನೆಂದು ನೀನು ಹೇಳಿ ಎಷ್ಟು ದಿನಗಳಾದವು – ನೆನಪಿದೆಯೇ" ಎಂದಳು.

"ನೆನಪಿದೆ."

"ಯಾವಾಗ ಕರೆದುಕೊಂಡು ಹೋಗುತ್ತೀ ?"

"ಸದ್ಯದಲ್ಲೇ – ಎಲ್ಲಿ ನಿನ್ನ ಕೈಕೊಡು."

ಸುರೈಯ್ಯ ತನ್ನ ಎರಡು ಕೈಗಳನ್ನೂ ಮುಂದೆ ಚಾಚಲು, ಗುಲ್‌ಷನ್ ಅವಳ ಎಡಗೈ ಹಿಡಿದು, ರೇಖೆಗಳನ್ನು ಪರೀಕ್ಷಿಸುತ್ತಾ ಕುಳಿತಳು.

ಸುರೈಯ್ಯಾನ ಕುತೂಹಲ ಕೆರಳಿತು.

"ನಿನಗೆ ಕೈನೋಡುವುದಕ್ಕೆ ಬರುತ್ತದೆಯೇ ಗುಲ್‌ಷನ್."

"ಅಲ್ಪಸ್ವಲ್ಪ – ಜನಾನಾದಲ್ಲಿ ಒಬ್ಬ ಮುದುಕಿಯಿದ್ದಾಳೆ – ಹಮೀದಾ–ಅವಳು ಬಲು ಚೆನ್ನಾಗಿ ಕೈ ನೋಡುತ್ತಾಳೆ. ನಾನು ಅವಳನ್ನಾಶ್ರಯಿಸಿ ಅಲ್ಪಸ್ವಲ್ಪ ಕಲಿತಿದ್ದೇನೆ."



"ನನ್ನ ಅದೃಷ್ಟ ಹೇಗಿದೆ?"

"ನಿನ್ನ ಅದೃಷ್ಟಕ್ಕೇನು ಕೊರತೆ – ಘನವಾಗಿದೆ."



"ಸರಿಯಾಗಿ ಹೇಳು ಗುಲ್‌ಷನ್."

"ಹೇಳುವುದಿಲ್ಲ ಎಂದರೆ ಏನುಮಾಡುತ್ತೀ?"

"ನಿನ್ನೊಂದಿಗೆ ಮಾತೇ ಆಡುವುದಿಲ್ಲ."

"ನೀನು ಆಡದಿದ್ದರೂ ಚಿಂತೆಯಿಲ್ಲ – ನಾನು ಹೇಳುವುದಿಲ್ಲ.

"ಏಕೆ?"

"ನಾನು ಹೇಳುವುದನ್ನು ನೀನು ನಂಬುವುದಿಲ್ಲ."

"ಅಲ್ಲಾ ಸತ್ಯವಾಗಿಯೂ ನಂಬುತ್ತೇನೆ. ಹೇಳು ಗುಲ್‌ಷನ್."

ಗುಲ್‌ಷನ್ ಅವಳ ವಾಮಹಸ್ತದ ರೇಖೆಗಳನ್ನೂ, ಗ್ರಹಸೂಚಕ ದಿಬ್ಬಗಳನ್ನೂ ಸೂಕ್ಷ್ಮವಾಗಿ ಪರೀಕ್ಷಿಸಿ ನೋಡುತ್ತಾ

"ನಿನ್ನ ಕೈಯಲ್ಲಿರುವ ರೇಖೆಗಳನ್ನು ನಂಬುವುದಾದರೆ ನೀನು ಸುಲ್ತಾನಾ ಆಗಬೇಕು – ಸುಲ್ತಾನಾ ಆಗಬೇಕಾದವಳು ಕಾಸ್ದಾರನ ಹೆಂಡತಿ ಹೇಗಾದೆ?"

"ನಾನು ಸುಲ್ತಾನಾ ಆಗಿದ್ದೇನಲ್ಲಾ ಗುಲ್‌ಷನ್."

"ಸುಲ್ತಾನಾ............"

"ಹೌದು – ನನ್ನ ಬಹಾದೂರ್ ನನ್ನ ಸುಲ್ತಾನ್ – ನಾನು ಅವರ ಸುಲ್ತಾನಾ."

"ಬಹಾದ್ದೂರನನ್ನು ತುಂಬ ಪ್ರೀತಿಸುವೆಯಾ ಸುರೈಯ್ಯಾ."

"ಪ್ರೀತಿಸುತ್ತೇನೋ ಇಲ್ಲವೋ ಎಂಬುದನ್ನು ನೀನೇ ಬಲ್ಲೆ."

"ನಾನು ಬಲ್ಲೆ – ಪ್ರೀತಿಯ ಲಕ್ಷಣವೇನು ಸುರೈಯ್ಯಾ?"

"ಅಷ್ಟೆಲ್ಲ ನಿನಗೆ ಹೇಳಲು ನಾನೇನು ಹಕೀಮಳೇ ಗುಲ್‌ಷನ್. ನೀನು ರಾಜಮಹಲಿನಲ್ಲಿ ಬೆಳೆದವಳು – ಬೇಕಾದಷ್ಟು ಓದಿದ್ದೀ – ನೀನೇ ಹೇಳು."

"ಪ್ರೀತಿಯ ಲಕ್ಷಣ – ತ್ಯಾಗ."

ಎನ್ನುತ್ತಿದ್ದಂತೆ ಗುಲ್‌ಷನಳ ಕಣ್ಣುಗಳಿಂದ ಹನಿಗಳು ತೊಟ್ಟಿಕ್ಕಿದವು.

ವಿಸ್ಮಯಗೊಂಡ ಸುರೈಯ್ಯಾ, ಗುಲ್‌ಷನಳನ್ನೇ ದಿಟ್ಟಿಸಿ ನೋಡುತ್ತ

"ಗುಲ್‌ಷನ್ – ನಿನ್ನ ಮೊಹಬತ್ತಿನ ಕುರ್ಬಾನಿ ಆಗಿದೆಯೇ ?"

"ಆಗಿದೆ. ಆಗುತ್ತಿದೆ."

"ಯಾರಿಗಾಗಿ ?"

"ಸೂರ್ – ನನ್ನ ಮುದ್ದು ತಂಗಿ – ನಿನಗಾಗಿ !"

"ನನಗಾಗಿ !!!"

"................"

"ಒಡಪಿನಲ್ಲಿ ಮಾತನಾಡಬೇಡಕ್ಕಾ – ಸ್ಪಷ್ಟವಾಗಿ ಹೇಳು."

"ನಾನು ಹೇಳುವ ಗುಟ್ಟು ನಮ್ಮಿಬ್ಬರಲ್ಲೇ ಇರುತ್ತದೆಂದು ಪ್ರಮಾಣ ಮಾಡುವೆಯಾ ?"

ಸುರೈಯ್ಯಾ ಗುಲ್‌ಷನಳ ಕೈಮೇಲೆ ಕೈಹಾಕಿ

"ಖುದಾ ಆಣೆಗೂ...." ಎಂದಳು.

ಗುಲ್‌ಷನ್ ದಿಂಬಿಗೆ ಆತುಕೊಂಡು ಕುಳಿತಳು.

ಅವಳ ನೋಟ ಸದ್ಯದ ಜಗತ್ತು ಬಿಟ್ಟು ಎತ್ತಲೋ ತೆರಳಿತ್ತು.

ಪೂರ್ವಸ್ಮರಣೆಯಲ್ಲಿ ಮುಗ್ನಳಾದ ಗುಲ್‌ಷನ್ ಮೆಲ್ಲನೆ ಒಂದೊಂದೇ ಮಾತನಾಡಲಾರಂಭಿಸಿದಳು.

"ಕೆಲವು ವರ್ಷಗಳ ಹಿಂದಿನ ಮಾತು — ನಾನೂ ತಕ್ಕಮಟ್ಟಿಗೆ ನೋಡಲು ಚೆನ್ನಾಗಿದ್ದೆ."

"ಈಗಲು ಚೆನ್ನಾಗಿಯೇ ಇದ್ದೀಯ."

"ಈಗಿರುವ ರೂಪ ಆಗಿನ ಅವಶೇಷ. ಆಗ ಹೃದಯದಲ್ಲಿ ಸಂತೋಷವಿತ್ತು. ಅದು ಮುಖದ ಮೇಲೆ ಚಿಮ್ಮಿ ನನ್ನ ರೂಪಿಗೆ ಪುಟಕೊಟ್ಟಿತ್ತು."

"ಈಗ ನೀನು ಅಸಂತೋಷಿಯೇ ?"

"ಕೇಳು – ಸುಲ್ತಾನ್ ಮುಹಮುದ್‌ಷಹರು ನನ್ನನ್ನು ಮೋಹಿಸಿದರು. ನನ್ನ ತಂದೆ ಅವರ ಕೈಕೆಳಗೆ ಸರದಾರರಾಗಿದ್ದರು. ನಾನು ಜನಾನಾ ಸೇರಬೇಕಾಗಿ ಬಂತು. ಸುಲ್ತಾನರು ನನ್ನನ್ನು ಬಹಳ ಪ್ರೀತಿಸುತ್ತಿದ್ದರು – ಈಗಲೂ ಪ್ರೀತಿಸುತ್ತಾರೆ. ಆದರೆ ಆ ಜವ್ವನದ ಸ್ಫೋಟಕ ಪ್ರಣಯವಲ್ಲ – ಗೃಹಜೀವನದ ಪ್ರಶಾಂತ ಪ್ರೇಮ. ಸುಲ್ತಾನರು ವೀರರು, ಉದಾರಿಗಳು, ದಯಾದಾಕ್ಷಿಣ್ಯ ಪರರು – ಆದರೆ ಅವರಲ್ಲಿ ಒಂದು ಪ್ರಬಲ ದೌರ್ಬಲ್ಯವಿದೆ."

"ಏನದು ?"

"ಸ್ತ್ರೀಲಾಂಪಟ್ಯ."

"ನನ್ನ ತರುವಾಯ ಹಲವರು ಜನಾನಾಕ್ಕೆ ಬಂದರು – ನೂರ್, ಜುಬೇದ, ರಜಿಯಾ, ದೌಲತ್ – ಎಲ್ಲರೂ ಸುಲ್ತಾನರ ಹೃದಯ ಸಾಮ್ರಾಜ್ಯವನ್ನು ನಾಲ್ಕು ನಾಲ್ಕು ದಿನ ಆಳಿದರು. ಆದರೆ ಯಾರಿಗೂ ಸುಲ್ತಾನರ ಮೈತ್ರಿ ದೊರೆಯಲಿಲ್ಲ. ಹೊಸ ಇನಿಯಳು ಕಾಲಿಟ್ಟೊಡನೆಯೇ ನಾನು ಹಿಂದೆ ಸರಿಯುತ್ತಿದ್ದೆ – ಸುಲ್ತಾನರು ನನ್ನ ಗುಣಕ್ಕೆ ಮೆಚ್ಚಿ ನನ್ನನ್ನೇ ಅರಸಿಕೊಂಡು ಬರುತ್ತಿದ್ದರು – ನನ್ನ ಜೀವನ ಈ ಕುರ್ಬಾನಿಯ ಮಹಾಕಾವ್ಯ ನೂರ್."

"ಈಗ ಯಾರಿಗಾಗಿ ನೀನು ಹಿಂದಕ್ಕೆ ಸರಿಯಬೇಕಾಗಿದೆ ಗುಲ್‌ಷನ್."

"ನಿನಗಾಗಿ ಸುರೈಯ್ಯಾ."

ಸುರೈಯ್ಯಳ ಮೈ ಕಂಪಿಸಿತು. ಗಡಗಡನೆ ನಡುಗುತ್ತಾ

"ಸುಲ್ತಾನರು........"

"ಹೌದು....ಸುಲ್ತಾನರು ನಿನ್ನ ಮೇಲಣ ಮೋಹದಿಂದ ಹಾಸಿಗೆ ಹಿಡಿದು ಮಲಗಿದ್ದಾರೆ. ವಕೀಲ್ ಅಸ್ ಸಲ್ತಾನಾ ಅವರಿಗೂ ಖಾವಂದರ ದರ್ಶನ ದೊರೆಯುತ್ತಿಲ್ಲ."

"ಈ ಕುತ್ತಿನಿಂದ ನನ್ನ ಪಾರುಮಾಡು ಗುಲ್‌ಷನ್. ಯಾವಜ್ಜೀವವೂ ನಾನು ಋಣಿಯಾಗಿರುತ್ತೇನೆ. ಇದುವರೆಗೆ ನಾವು ಸಂಪಾದಿಸಿರುವ ಹೊನ್ನನ್ನೆಲ್ಲಾ ನಿನಗೆ ಕೊಟ್ಟುಬಿಡುತ್ತೇನೆ. ಸುಲ್ತಾನರ ಮನವೊಲಿಸಿ ನನ್ನನ್ನೂ ಬಹಾದೂರನನ್ನೂ ಇಸ್ತಾಂಬೂಲಿಗೆ ಕಳಿಸಿಕೊಟ್ಟುಬಿಡು."

"ಅದು ಸಾಧ್ಯವಾಗಿದ್ದರೆ ಈವರೆಗೆ ನಾನು ಸುಮ್ಮನೆ ಕೂಡುತ್ತಿದ್ದೆನೇ? ನೂರ್."

ಉತ್ಕಂಠಿತಳಾದ ಸುರೈಯ್ಯಾ ಗುಲ್‌ಷನ್ ಬಳಿಗೆ ಬಂದು ಅವಳ ಕೈಗಳನ್ನು ಬಲವಾಗಿ ಹಿಡಿದು,

"ನನ್ನ ಖಾನ್‌ಗೆ ಪ್ರಾಣಾಪಾಯವಿರುವುದೇ ಗುಲ್‌ಷನ್."

"ಇದೆ – ತೋರಿಕೆಗೆ ನೀವು ಸ್ವತಂತ್ರರಾದರೂ, ನೀವಿಬ್ಬರೂ ಬಂದಿಗಳು. ನಿಮ್ಮ ಮೇಲೆ ಬಲವಾದ ಕಾವಲಿದೆ. ನಿಮ್ಮ ಪ್ರತಿಯೊಂದು ಚಲನವಲನವೂ ಸುಲ್ತಾನರ ಗೂಢಚಾರರಿಗೆ ಗೊತ್ತಿದೆ."

"ಅಯ್ಯೋ ಅಕ್ಕ – ಇನ್ನೇನು ಗತಿ – ನನ್ನ ಹಾಳುರೂಪ ನನ್ನ ಖಾನನ ಮೃತ್ಯುವಾಗಬೇಕೇ ?"

" ಅದು ನಿನ್ನ ಖಾನನ ಮೃತ್ಯುಮಾತ್ರವೇ ಅಲ್ಲ – ಬಹಮನಿ ವಂಶದ ಮೃತ್ಯುವೂ ಆಗಬಹುದು. ಸುಲ್ತಾನರಿಗೆ ಏನಾದರೂ ಅಪಾಯ ಸಂಭವಿಸಿದರೆ ಬಹಮನಿ ರಾಜ್ಯದ ಮೇಲೆ ವಿಜಯನಗರದ ಪತಾಕೆಯೇರುತ್ತದೆ — ಗುಲ್‌ಷನ್, ನಿನಗೆ ನಿನ್ನ ಖಾನ್ ಹೆಚ್ಚೋ ಇಸ್ಲಾಂ ಹೆಚ್ಚೋ ?"

" ಎರಡೂ........"

" ಎರಡರಲ್ಲಿ ?"

"................"

" ಇಸ್ಲಾಂ ಉಳಿಯಲಿ ಎಂದು ನೀನು ಆಶಿಸುವುದಾದರೆ ನಿನ್ನ ಖಾನನ ಕುರ್ಬಾನಿಗೆ ಒಪ್ಪಬೇಕಾಗುತ್ತದೆ."

" ಅವರ ಪ್ರಾಣ...."

" ಖಾನನ ಕೂದಲು ಕೊಂಕದಂತೆ ಆವನನ್ನು ಇಸ್ತಾಂಬೂಲ್ ಮುಟ್ಟಿಸುವ ಜವಾಬ್ದಾರಿ ನನಗಿರಲಿ. ಅವನು ಜೀವಂತನಾಗಿರುವವರೆಗೆ ಸುಖಜೀವನ ನಡೆಸಲು ಸಾಕಷ್ಟು ಹೊನ್ನು ಕೊಡಿಸುತ್ತೇನೆ."

ಸುರೈಯ್ಯ ನೆಲದ ಮೇಲೆ ಬಿದ್ದು ಹಣೆ ಚಚ್ಚಿಕೊಳ್ಳುತ್ತಾ, ಎದೆ ಬಡಿದುಕೊಳ್ಳುತ್ತಾ

" ಈ ಮಾತು ಹೇಗೆ ಹೇಳಬಲ್ಲೆ ಗುಲ್‌ಷನ್ " ಎಂದಳು.

" ಹೇಳಲು ಬಾಯಿ ಬರದು ತಂಗೀ – ಆದರೆ ಹೇಳಬೇಕಾಯಿತು." ಎಂದವಳೇ ಅಲ್ಲಿಂದ ಎದ್ದು ಹೊರಟುಬಿಟ್ಟಳು.

ನಾಲ್ಕು ದಿನಗಳು ನಾಲ್ಕು ಕ್ಷಣಗಳಂತೆ ಕಳೆದು ಹೋದವು.

ಒಂದು ರಾತ್ರಿ ಮನೆಗೆ ಬಂದ ಬಹದೂರ್‌ಖಾನ್ ಅಂಗಿ ಕಳಚಿ ಸುರೈಯ್ಯಳ ಕೈಗಿತ್ತ. ಅವಳು ಅದನ್ನು ಒಳಗಿಟ್ಟು ಬರಲು ಹೋಗುತ್ತಿದ್ದಂತೆ, ಅವಳ ಕೈ ಹಿಡಿದು, ಅಂಗಿಯನ್ನು ಅವಳ ಕೈಯಿಂದೆತ್ತಿಕೊಂಡು, ದೂರ ಬಿಸುಟು, ಸುರೈಯ್ಯಳನ್ನಪ್ಪಿ ಚುಂಬಿಸುತ್ತ,

" ಏಕೆ ಸೂರ್ – ನಾಲ್ಕು ದಿನದಿಂದ ಏನೋ ಒಂದು ರೀತಿಯಲ್ಲಿದ್ದೀ? ಮನಸ್ಸಿಗೆ ಬೇಸರವೊ – ನನ್ನ ಮೇಲೆ ಕೋಪವೋ ?"

ಖಾನನ ಹಿಡಿತದಿಂದ ಮೆಲ್ಲನೆ ಬಿಡಿಸಿಕೊಂಡ ಸುರೈಯ್ಯ,

" ಬೇಸರವೂ ಆಗಿದೆ – ಕೋಪವೂ ಬಂದಿದೆ" ಎಂದಳು.

" ಏಕೆ ?"

" ಈ ಹಾಳು ಕೊಂಪೆಗೇಕೆ ನನ್ನನ್ನು ಕರೆದುಕೊಂಡು ಬಂದಿರಿ ?"

"ಕುದುರೆಗಳನ್ನೊಪ್ಪಿಸಿ ಬರುತ್ತೇನೆಂದು ನಾನು ಹೇಳಿದಾಗ, ಜತೆಯಲ್ಲಿ ಬರಲು ನೀನೇ ಹಟಮಾಡಿದೆ ?"

"ಬಂದೆ ನಿಜ – ಊರಿಗೆ ಹಿಂದಿರುಗುವ ಸಿದ್ಧತೆ ನೀವೇಕೆ ಮಾಡಿಲ್ಲ."

"ಊರಿಗೆ ಹೋಗಿ ನಾವೇನು ಮಾಡಬೇಕು ಸೂರ್. ಇಲ್ಲಿ ನಮಗೇನು ಕಡಿಮೆಯಾಗಿದೆ. ಸುಲ್ತಾನರು ನನ್ನ ಮೇಲೆ ವಿಶ್ವಾಸ ತಳೆದಿದ್ದಾರೆ. ಇಂದು ಅಶ್ವರಕ್ಷಕನಾಗಿರುವ ನಿನ್ನ ಖಾನ್ ನಾಳೆ ಸರ್ದಾರ್ ಆಗಬಹುದು."

ಸುರೈಯ್ಯಳ ಮೈ ನಡುಗಿತು.

"ನಮಗೆ ಅಶ್ವರಕ್ಷಕ ಹುದ್ದೆಯೂ ಬೇಡ – ಸರ್ದಾರ್ ಪದವಿಯೂ ಬೇಡ. ಊರಿನಲ್ಲಿ ನಾವು ಉಪವಾಸವಿರುತ್ತಿದ್ದೆವೇ? ಇಸ್ತಾಂಬೂಲಿಗೆ ನಾವು ಹಿಂದಿರುಗಿದರೆ ಖುದಾ ನಮಗೆ ರೊಟ್ಟಿ ಕೊಡದೆ ಉಪವಾಸ ಸಾಯಿಸುತ್ತಾನೆಯೇ ?"

"ನಾಲ್ಕು ವರ್ಷ ಇಲ್ಲಿದ್ದು, ಕೈತುಂಬ ಹಣ ಮಾಡಿಕೊಂಡು ಊರಿಗೆ ಹಿಂದಿರುಗುವ ಯೋಚನೆ ಮಾಡಿದ್ದೆ."

"ಖಾನ್ – ನಿಮಗೆ ಹಣ ಬೇಕೋ ನಾನು ಬೇಕೋ ?"

"ಹುಚ್ಚಿ ಎಂಥಹ ಪ್ರಶ್ನೆ ಕೇಳುತ್ತೀ – ನಿನಗೋಸ್ಕರವಾಗಿಯಲ್ಲವೇ ನಾನು ಹಣ ಬಯಸುತ್ತಿರುವುದು."

"ನನಗೆ ರೇಶ್ಮೆ, ಕಿನ್‌ಕಾಪ್ ಬೇಕಾಗಿಲ್ಲ. ಉಟ್ಟಿರುವ ನೂಲು ಅರಿವೆಗೆ ತೇಪೆ ಹಾಕಿಕೊಂಡು ಮರ್ಯಾದೆಯಾಗಿ ಬಾಳಬಲ್ಲೆ."

"ಈ ಬಗ್ಗೆ ನೀನಿಂಥ ನಿರ್ಧಾರಕ್ಕೆ ಬರಲೇನು ಕಾರಣ ?"

"ಈ ಊರು – ಜನ ನನಗೆ ಸರಿಹೋಗುವುದಿಲ್ಲ ಖಾನ್. ಇಲ್ಲಿ ಬೇಕಾದಷ್ಟು ಮಸೀದಿಗಳಿವೆ – ಅಲ್ಲಾ ಇಲ್ಲ ಇಲ್ಲಿಯ ಜನರ ಹೃದಯದಲ್ಲಿ ದಯೆಯೇ ಇಲ್ಲ. ತುರ್ಕಿಯ ಸ್ತ್ರೀಯರ ಸ್ಥಿತಿಯೇ ಚಿಂತಾಜನಕವಾಗಿದೆ. ಇಲ್ಲಿಯ ಸ್ತ್ರೀಯರ ಸ್ಥಿತಿ ಮತ್ತಷ್ಟು ಚಿಂತಾಜನಕವಾಗಿದೆ. ನಮಗೆ ನಮ್ಮೂರೇ ಸರಿ ಖಾನ್."

ಖಾನ್ ಯೋಚಿಸುತ್ತ

"ನಿನ್ನ ಮನಸ್ಸಿಗೆ ವಿರೋಧವಾಗಿ ಆಚರಿಸಿ ನಾನು ಸಾಧಿಸಬೇಕಾಗಿರುವುದಾದರೂ ಏನು ಸುರೈಯ್ಯಾ—ನಿಂತ ಘಳಿಗೆಯಲ್ಲಿ ನಾವು ಊರಿಗೆ ಹೊರಡುವುದು ಸಾಧ್ಯವಿಲ್ಲವಾಗಿದೆ. ಸುಲ್ತಾನರ ಆರೋಗ್ಯ ಚೆನ್ನಾಗಿಲ್ಲವಂತೆ. ಯಾರಿಗೂ ಅವರು ಭೇಟಿ ದಯೆಪಾಲಿಸುತ್ತಿಲ್ಲವಂತೆ !

ಸುಲ್ತಾನರನ್ನು ಕಾಣದೆ ನಾವು ಹೊರಡಲು ಸಾಧ್ಯವಿಲ್ಲ."

"ಅಬ್ದುಲ್ಲಾ ವ್ಯವಸ್ಥೆ ಮಾಡಲಾರನೇ ?"

"ಅಬ್ದುಲ್ಲಾ ಒಬ್ಬ ಗುಲಾಮ – ಅವನು ಸುಲ್ತಾನರ ಮನಸ್ಸಿಗೆ ವಿರೋಧವಾಗಿ ನಡೆಯಬಲ್ಲನೇ ? ಸುಲ್ತಾನರು, ನಾನು ನಮ್ಮಿಬ್ಬರನ್ನು ಬಿಟ್ಟು ಯಾರೂ ಬೆಹ್ರಾಮನಿಗೆ ಬಳಿ ಸುಳಿಯುವಂತಿಲ್ಲ. ಸುಲ್ತಾನರು ಕಾಹಿಲೆ ಬಿದ್ದಂದಿನಿಂದ ಅವರು ಬೆಹ್ರಾಮನನ್ನು ಕಣ್ಣೆತ್ತಿಯೂ ನೋಡಿಲ್ಲ. ಬೆಹ್ರಾಮನ ಜವಾಬ್ದಾರಿಯೆಲ್ಲಾ ನನ್ನ ಮೇಲೆ ಬಿದ್ದಿದೆ. ಇದ್ದಕ್ಕಿದ್ದಂತೆ ನಾನು ಹೊರಟು ಬಿಟ್ಟರೆ ಬೆಹ್ರಾಮ್ ಪ್ರಾಣ ಒಪ್ಪಿಸಿಬಿಡುತ್ತದೆ."

"ಇಲ್ಲಿಂದ ಹೊರಡುವುದು ಖಂಡಿತ ತಾನೇ !"

"ಖಸಂಸೆ – ಸುಲ್ತಾನರ ಭೆಟ್ಟಿ ದೊರೆತ ದಿನವೇ ಈ ವಿಷಯ ನಾನು ಪ್ರಸ್ತಾಪಿಸುತ್ತೇನೆ." ಎಂದ.

ಸುಪ್ರೀತಳಾದ ಸುರೈಯ್ಯಾ ಹರ್ಷಗೊಂಡು ಖಾನನ ತೊಡೆಯೇರಿ ಕುಳಿತಳು. ಖಾನ್ ಅವಳ ಮುಂಗುರುಳು ತಿದ್ದುತ್ತಾ, ಆ ಮಾದಕ ಸೌಂದರ್ಯದಲ್ಲಿ ಮೈಮರೆತ.

ಯಾರೋ ಬಾಗಿಲು ಬಡಿದರು.

ಖಾನನ ಹುಬ್ಬು ಗಂಟಿಕ್ಕಿತು.

ಬಾಗಿಲು ಬಡಿದವರು ಕೂಗಿದರು.

"ಬಹಾದೂರ್ – ಬಹಾದೂರ್ ಖಾನ್."

"ಅಬ್ದುಲ್ಲನ ಧ್ವನಿ ಇದ್ದ ಹಾಗಿದೆ. ಸುಲ್ತಾನರು ಹೇಳಿ ಕಳಿಸಿದ್ದಾರೋ ಏನೋ. ಬೇಗ ನನ್ನ ಅಂಗಿ ಕೊಡು." ಎಂದ.

ಸುರೈಯ್ಯ ಅಂಗಿ ಕೈಗೆತ್ತಿಕೊಂಡು ಅವನಿಗೆ ತೊಡಿಸಿದಳು.

ಖಾನನೇ ಹೋಗಿ ಬಾಗಿಲು ತೆಗೆದು ಅಬ್ದುಲ್ಲನೊಂದಿಗೆ ಒಳಗೆ ಬಂದ.

"ಬೇಗ ಹೊರಡು ಬಹಾದೂರ್ – ಈಗಲೇ ನಿನ್ನನ್ನು ಕರೆತರುವಂತೆ ಸುಲ್ತಾನರ ಹುಕುಂ ಆಗಿದೆ."

"ಸುಲ್ತಾನರ ಆರೋಗ್ಯ ನೆಟ್ಟಗಿಲ್ಲವಲ್ಲ !"

"ಇವತ್ತು ಎದ್ದು ಕುಳಿತಿದ್ದಾರೆ. ಓರುಗಲ್ಲಿನಿಂದ ಕೆಟ್ಟ ಸುದ್ದಿ ಬಂದಿದೆ. ವಿನಾಯಕದೇವ, ವಿಜಯನಗರದವರ ಸಹಾಯ ಪಡೆದು ನಮ್ಮ ರಾಜ್ಯ ಮುತ್ತುವ ಯೋಚನೆಯಲ್ಲಿದ್ದಾನಂತೆ. ನಮಗೆ ನೂರಾರು ಉತ್ತಮಾಶ್ವಗಳು ಬೇಕಾಗಿವೆ – ಪ್ರಾಯಶಃ ನೀನು ನಾಳೆ ನಾಡಿದ್ದರಲ್ಲಿ

ಇಸ್ತಾಂಬೂಲಿಗೆ ಹೋಗಿ ಬರಬೇಕಾಗಿ ಬರಬಹುದು."

ಖಾನ್ ಸುರೈಯ್ಯನ ಕಡೆ ತಿರುಗಿ ಮುಗುಳ್ನಗೆ ಬೀರಿ

" ರೋಗಿ ಬಯುಸಿದ್ದೂ ಹಾಲೂ ಅನ್ನ – ಹಕೀಂ ಹೇಳಿದ್ದೂ ಹಾಲು ಅನ್ನ"

ಎಂದು ನುಡಿದು ಅಬ್ದುಲ್ಲನ ಜತೆ ಹೊರಟುಬಿಟ್ಟ.

ತನ್ನ ಪ್ರಾರ್ಥನೆ ಖುದಾ ಕಿವಿ ಮುಟ್ಟಿತೆಂದು ಭಾವಿಸಿದ ಸುರೈಯ್ಯಾ ಜುಮ್ಮಾ ಮುಗಿಸಿ ವಿಶ್ರಾಂತಿಗೆ ತೆರಳಿದಳು.

ಮೊದಲನೆಯ ಝಾಮು ಬಂದಿತು.

ಕಾಪಿನ ಭಟರು ' ಹೊಷಿಯಾರ್ ' ಕೂಗಿಕೊಂಡು ಹೋದರು.

ಮೆಲ್ಲನೆದ್ದ ಸುರೈಯ್ಯಾ ದೀಪ ದೊಡ್ಡದು ಮಾಡಿ ಕಿಟಕಿಯಾಚೆ ನೋಡಿದಳು. ಖಾನ್ ಬರುವ ಲಕ್ಷಣ ಕಂಡು ಬರಲಿಲ್ಲ.

' ಇಷ್ಟು ಹೊತ್ತಿನವರೆಗೆ ಸುಲ್ತಾನರು ಏನು ಮಾತನಾಡುತ್ತಿರಬಹುದು"
ಎಂದು ಯೋಚಿಸುತ್ತ ಕುಳಿತಳು.

ಎರಡನೆಯ ಝಾಮುವೂ ಕಳೆದುಹೋಯಿತು.

ಸುರೈಯ್ಯನಿಗೆ ದಿಕ್ಕೇ ತೋರಲಿಲ್ಲ.

ದೀಪ ಉರಿಸಿಕೊಂಡು ಜಾಗರಣೆ ಮಾಡುತ್ತಾ ಕುಳಿತಳು.

ಝಾಮುಗಳ ಮೇಲೆ ಝಾಮುಗಳ ಕಳೆದು ಬೆಳಗಾಯಿತು.

ಬೆಳಕಿಂಡಿಯಿಂದ ಉದಯರವಿಯು ಪ್ರಥಮ ಕಿರಣಗಳು ಸುರೈಯ್ಯನ ಮನೆ ಪ್ರವೇಶಿಸಿದವು

ಆದರೆ ಅವಳ ಹೃದಯ ಗಾಢಾಂಧಕಾರದಿಂದ ತುಂಬಿತ್ತು – ಅದನ್ನು ಬೆಳಗಿಸುವ ಉದಯರವಿ ಇನ್ನೂ ಬಂದಿರಲಿಲ್ಲ.

## ೧೨

ದಿಜ್ಮೂಢಳಾದ ಸುರೈಯ್ಯಾ ಅಳುತ್ತ ಕುಳಿತಳು.

ಅತ್ತು ಅತ್ತು ಅವಳ ಕಣ್ಣುಗಳಲ್ಲಿನ ನೀರೂ ಬತ್ತಿ ಹೋಯಿತು.

'ಗುಲ್‌ಷನ್ – ಗುಲ್‌ಷನ್ – ಅವಳಾದರೂ ಬರಬಾರದೇ?'

ಎಂದು ಸುರೈಯ್ಯಾನ ಮನಸ್ಸು ಬಯಸಿತು.

ಮರುಕ್ಷಣವೇ ಭಯವಾವರಿಸಿತು.

'ಈ ಸಂಚಿನಲ್ಲಿ ಗುಲ್‌ಷನಳೂ ಭಾಗಿಯೇ?'

'ಯಾರನ್ನು ನಂಬುವುದು? – ನನಗೆ ಯಾರು ದಿಕ್ಕು'

ಎಂದು ಗೋಳಾಡಿದಳು.

ದುಃಖಪಾರಾವಾರದಲ್ಲಿ ಮುಳುಗಿದ್ದ ಸುರೈಯ್ಯಾನ ಮನಸ್ಸಿನಲ್ಲೊಂದು ಹುಲುಧೈರ್ಯ.

'ಖಾನ್ ಮಹಾವೀರ. ಒಂದೇ ಪೆಟ್ಟಿಗೆ ಹತ್ತು ಜನ ಶಸ್ತ್ರಪಾಣಿಗಳಾಗಿ ಮೇಲೆ ಬಿದ್ದರೂ ಆತ್ಮರಕ್ಷಣೆ ಮಾಡಿಕೊಳ್ಳಲು ಸಮರ್ಥ. ಅವನು ಹೇಗಾದರೂ ಬಂಧನದಿಂದ ಪಾರಾಗಿ ಬಂದೇ ಬರುತ್ತಾನೆ.

'ಖಾನ್ ಸಮರ್ಥ – ವೀರ; ಸುಲ್ತಾನರ ಸಹಸ್ರಾರು ಸೈನಿಕರ ಮುಂದೆ ಒಬ್ಬ ಖಾನ್ ಏನು ಮಾಡಬಲ್ಲ. ಆತ್ಮರಕ್ಷಣೆ ಮಾಡಿಕೊಳ್ಳುವುದಕ್ಕೂ, ಅವನಿಗೆ ಅವಕಾಶ ಕೊಡದೆ ಬೆನ್ನಲ್ಲಿ ಇರಿದರೆ ಏನು ಗತಿ?'

ಯೋಚಿಸಿ ಯೋಚಿಸಿ ದುಃಖಿಸಿ ದುಃಖಿಸಿ ಸಾಕಾಗಿ ಸುರೈಯ್ಯಾ ಒಂದು ನಿರ್ಧಾರಕ್ಕೆ ಬಂದಳು.

'ಮಧ್ಯಾನ್ಹದವರೆಗೂ ಕಾದು ನೋಡುವುದು. ಆ ವೇಳೆಗೆ ಖಾ ಬರದಿದ್ದರೆ ತಾನೇ ನೇರವಾಗಿ ರಾಜಮಹಲಿಗೆ ಹೋಗಿ ಸುಲ್ತಾನರಿಗೆ ದೂರು ಕೊಡುವುದು.'

ತನ್ನ ದೂರಿನಿಂದ ಏನು ಪ್ರಯೋಜನವಾಗಬಹುದೆಂಬ ವಿಚಾರ ವಿಮರ್ಶೆಗೆ ಸುರೈಯ್ಯಾ ಹೊರಡಲಿಲ್ಲ. ಒಬ್ಬ ಅಸಹಾಯಕ ಸ್ತ್ರೀಗೆ ಸ್ವಯಂ

ಸುಲ್ತಾನರಿಂದ ಅನ್ಯಾಯವಾಗಿರುವುದನ್ನು ಕಂಡು ಜನ ಸುಮ್ಮನಿರುವರೇ ? ರಾಜಪ್ರತಿನಿಧಿಗಳಾದ ವಕೀಲ್ ಅಸ್ ಸಲ್ತಾನಾ ಸುಮ್ಮನಿರುವರೇ ?'

ಹಲವಾರು ಸಂದೇಹಗಳಿಗೀಡಾಗಿ ಸುರೈಯ್ಯಳ ಮನಸ್ಸು ಅಲ್ಲಕಲ್ಲೋಲ ವಾಗಿತ್ತು.

ಒಳಗೆ ಗುಲ್‌ಷನ್ ಬಂದುದನ್ನೂ ಅವಳು ಪರಿಗಣಿಸಲೇ ಇಲ್ಲ.

“ ಸುರೈಯ್ಯಾ – ಸುರೈಯ್ಯಾ.“

ಗುಲ್‌ಷನಳನ್ನು ಕಂಡೊಡನೆಯೇ ಬಿಕ್ಕಿಬಿಕ್ಕಿ ಅಳುತ್ತಾ ಸುರೈಯ್ಯ ಅವಳನ್ನಪ್ಪಿ

“ ನನ್ನ ಖಾನನನ್ನು ಕೊಂಡುಹೋದರು ಗುಲ್‌ಷನ್ ”

ಎಂದು ಚೀತ್ಕರಿಸಿದಳು.

ಪ್ರಶಾಂತಳಾಗಿದ್ದ ಗುಲ್‌ಷನ್

” ನಾನು ಬಲ್ಲೆ ಸುರೈಯ್ಯಾ.”

“ ತಿಳಿದೂ ಸುಮ್ಮನಿರುವೆಯಾ ?”

“ ಏನು ಮಾಡಲಿ. ನೀನೆಷ್ಟು ಅಸಹಾಯಕಳೋ ನಾನೂ ಅಷ್ಟೇ ಅಸಹಾಯಕಳು – ಖಾನರನ್ನು ಯಾವಾಗ ಕರೆದೊಯ್ದರು.”

“ ನಿನ್ನೆ ರಾತ್ರಿ – ಸುಲ್ತಾನರು ನೋಡಬಯಸುತ್ತಾರೆಂದು ಹೇಳಿ ಅಬ್ದುಲ್ಲಾ ಕರೆದೊಯ್ದು – ಈವರೆಗೆ ಅವರು ಹಿಂದಿರುಗಿಲ್ಲ. ನಿನಗೆ ಈ ವಿಷಯ ಗೊತ್ತಾದುದು ಯಾವಾಗ ?”

“ ಸ್ವಲ್ಪ ಹೊತ್ತಿಗೆ ಮುಂಚೆ ಸುಲ್ತಾನರು ನನ್ನನ್ನು ಕರೆಕಳಿಸಿ....”

“ ಸುಲ್ತಾನರು ಆರೋಗ್ಯವಾಗಿದ್ದಾರೆಯೇ ?”

“ ಅವರು ಆರೋಗ್ಯವಾಗಿಯೇ ಇದ್ದಾರೆ.”

“ ನಿನ್ನನ್ನು ಕರೆಕಳಿಸಿ ಏನು ಹೇಳಿದರು.”

“ ಬಹಾದೂರ್ ಖಾನನನ್ನು ಸುರಕ್ಷಿತವಾಗಿ ನಾವು ಬೇರೆಕಡೆ ಇಟ್ಟಿದ್ದೇವೆ – ನೀನು ಈಗಲೇ ಹೋಗಿ ಸುರೈಯ್ಯಳನ್ನು ಕರೆದುಕೊಂಡು ಬಾ ಎಂದು ಅಪ್ಪಣೆಮಾಡಿದ್ದಾರೆ.”

“ ನನ್ನ ಖಾನ್ ಜೀವಂತರಾಗಿದ್ದಾರೆಯೇ ?”

“ ಇದ್ದಾರೆ.”

“ ಸುಲ್ತಾನರು ನಿನಗೂ ನನಗೂ ಸುಳ್ಳು ಹೇಳುತ್ತಿರಬಹುದು.”

"ಇಲ್ಲ – ನಾನು ಬಿಡಿಸಿ ಕೇಳಿ ಈ ವಿಷಯ ಇತ್ಯರ್ಥಮಾಡಿ ಕೊಂಡಿದ್ದೇನೆ."

"ಇತ್ಯರ್ಥ...."

"ಖಾನ್ ಬದುಕಿದ್ದಾರೆನ್ನುವುದಕ್ಕೆ ಏನು ಸಾಕ್ಷಿ ಎಂದು ಸುಲ್ತಾನರನು ಕೇಳಿದೆ – ಸುಲ್ತಾನ್ ಮಹಮುದ್ ಸುಳ್ಳು ಹೇಳುವುದಿಲ್ಲ ಗುಲ್‌ಷನ್ – ನನ್ನ ಮಾತಿನಲ್ಲಿ ನಿನಗೆ ನಂಬಿಕೆಯಿಲ್ಲದಿದ್ದರೆ ಖಾನನನ್ನು ಇಲ್ಲಿಗೆ ಕರೆಸುತ್ತೇನೆ ಎಂದರು – ಅವರನ್ನೇನು ಮಾಡುವಿರಿ ಎಂದು ಕೇಳಿದೆ."

"ಅದಕ್ಕೇನು ಹೇಳಿದರು ?"

"ಬಹಾದೂರ್ ಖಾನನ ಮೇಲೆ ನಮಗೆ ದ್ವೇಷವಿಲ್ಲ. ಅವನು ನಮ್ಮ ಪ್ರತಿನಿಧಿಯಾಗಿ ಇಸ್ತಾಂಬೂಲಿನಲ್ಲಿ ಇದ್ದುಕೊಂಡು ನಮಗೆ ಉತ್ತಮಾಶ್ವ ಗಳನ್ನು ಒದಗಿಸಲಿ. ಸಂಭಾವನೆ, ಪುರಸ್ಕಾರದ ಬಗ್ಗೆ ನಾವು ಕಾರ್ಪಣ್ಯ ತೋರುವುದಿಲ್ಲ ಎಂದರು."

"ಖಾನರ ಜತೆ ನಾನೂ ಹೋಗಬಹುದೇ ?"

ಗುಲ್‌ಷನ್ ತಲೆಯಳ್ಳಾಡಿಸಿ

"ಅದೇ ಸುಲ್ತಾನರ ಕರಾರು ಸುರೈಯ್ಯಾ. ನೀನು ಸ್ವಸಂತೋಷದಿಂದ ಜನಾನಾ ಸೇರುವುದಾದರೆ ಖಾನನಿಗೆ ಪ್ರಾಣಭಿಕ್ಷೆ ನೀಡಿ, ಅವನನ್ನು ಸುರಕ್ಷಿತವಾಗಿ ಇಸ್ತಾಂಬೂಲಿಗೆ ಕಳಿಸಿಕೊಡುವುದಾಗಿ ಹೇಳಿದರು."

"ನಾನು ನಿರಾಕರಿಸಿದರೆ ?"

"ಖಾನನಿಗೆ ಮರಣದಂಡನೆ."

"ಯಾವ ಅಪರಾಧಕ್ಕಾಗಿ."

"ಯಾವ ಅಪರಾಧವೂ ಮಾಡದಿದ್ದ ಅಪರಾಧಕ್ಕಾಗಿ."

"ನಾನೇನು ಮಾಡಲಿ ಗುಲ್‌ಷನ್ ?"

"ನಾನು ಹೇಳುವುದೆಲ್ಲಾ ಮುಗಿದಿದೆ ಸುರೈಯ್ಯಾ – ನಿನಗೆ ತೋರಿದಂತೆ ನೀನು ಮಾಡಬಹುದು."

ಅವಾಕ್ಕಾಗಿ ಸುರೈಯ್ಯ ಸ್ವಲ್ಪ ಹೊತ್ತು ಕುಳಿತುಬಿಟ್ಟಳು.

ಅವಳ ನಿರ್ಧಾರ ನಿರೀಕ್ಷಿಸುತ್ತ ಗುಲ್‌ಷನ್ ತುಟಿಪಿಟಕ್ಕೆನ್ನದೆ ನಿಂತೇ ಇದ್ದಳು.

ಅಸಹಾಯಕ ಶಿಶುವಿನಂತೆ ಕತ್ತೆತ್ತಿ ನೋಡಿದ ಸುರೈಯ್ಯಾ

"ನನಗೇನೂ ತೋರುತ್ತಿಲ್ಲ ಗುಲ್‌ಷನ್ – ನನ್ನ ಖಾನನ ಜೀವ

ಉಳಿದರೆ ಸಾಕು. ನೀನು ಏನು ಹೇಳಿದರೂ ಮಾಡಲು ಸಿದ್ಧಳಿದ್ದೇನೆ." ಎಂದಳು.

ಗುಲ್‌ಷನ್ ಕೈಚಪ್ಪಾಳೆ ತಟ್ಟಲು ಹೊರಗಿದ್ದ ಇಬ್ಬರು ಸೇವಿಕೆಯರು ವಸ್ತ್ರಭೂಷಣ, ನಗನಾಣ್ಯ ತುಂಬಿದ್ದ ಎರಡು ತಟ್ಟೆಗಳನ್ನು ತಂದು ಗುಲ್‌ಷ್ರ್ ಮುಂದಿಟ್ಟು ನಿಂತರು.

" ನೀನು ಸಿಂಗರಿಸಿಕೊಳ್ಳಬೇಕು ಸುರೈಯ್ಯಾ."

"ಒಲ್ಲೆ – ಒಲ್ಲೆ – ಯಾವ ಸಂತೋಷ ನನ್ನ ಹೃದಯ ತುಂಬಿದೆಯೆಂದು ಸಿಂಗರಿಸಿಕೊಳ್ಳಲಿ."

ಸೇವಿಕೆಯರು ಕಣ್ಸೂಚನೆಯಂತೆ ತಟ್ಟೆಗಳನ್ನು ಕೈಗೆತ್ತಿಕೊಂಡರು.

ದುರ್ಬಲಳಾಗಿದ್ದ ಸುರೈಯ್ಯಾನ ಕೈಹಿಡಿದೆಬ್ಬಿಸಿ ಗುಲ್‌ಷ್ರ್ ಮೆಲ್ಲನವಳನ್ನು ಮೇನೆಯ ಬಳಿಗೆ ಕರೆದೊಯ್ದಳು.

ಇಬ್ಬರೂ ಮೇನೆಯಲ್ಲಿ ಕೂಡಲು, ಬೋಯಿಗಳು ಮೇನೆ ಹೊತ್ತರು. ಅವಕುಂಠನವತಿಯರಾದ ಸೇವಿಕೆಯರು ಮೇನೆಯ ತೆರೆಯೆಳೆದರು.

## ೧೩

ರಾಜಮಹಲಿನ ' ಖಾಸ್ ಬಿಡದಿ ' ಯ ವಾಮಪಾರ್ಶ್ವದಲ್ಲಿ ಸುರೈಯ್ಯ ವಾಸಿಸಲು ಅನುಕೂಲ ಮಾಡಿಕೊಡಲಾಗಿತ್ತು.

ರಾಜಮಹಲಿಗೆ ಅವಳು ಬಂದು ಮೂರು ದಿವಸಗಳಾಗಿದ್ದರೂ ಆಹಾರ ಮುಟ್ಟಿರಲಿಲ್ಲ – ವಸ್ತ್ರ ಬದಲಿಸಿರಲಿಲ್ಲ – ಸ್ನಾನ ಮಾಡುವ ಗೋಜಿಗೇ ಹೋಗಿರಲಿಲ್ಲ. ಅರೆ ಗಾಯಗೊಂಡ ವ್ಯಾಘ್ರಿಯಂತಾಗಿದ್ದ ಸುರೈಯ್ಯಾನ ಬಳಿ ಸುಳಿಯಲು ಅರಮನೆಯ ದಾಸದಾಸಿಯರು ಅಂಜುತ್ತಿದ್ದರು.

ಅರೆ ಹುಚ್ಚಳಂತಾಗಿದ್ದ ಸುರೈಯ್ಯಾ ಲೋಕದ ಪರಿವೆಯೇ ಇಲ್ಲದೆ ದುಃಖಕ್ಕೆ ತನ್ನ ತನುಮನ ಒಪ್ಪಿಸಿಬಿಟ್ಟಿದ್ದಳು.

ಮುಖ ಮುಚ್ಚಿಕೊಂಡು ಹಾಸಿಗೆಯ ಮೇಲೆ ಅಳುತ್ತ ಮಲಗಿದ್ದ

ಸುರೈಯ್ಯಳ ಬಳಿ ಬಂದು ಕುಳಿತ ಗುಲ್‌ಷನ್

"ಸೂರ್" ಎಂದಳು.

ಸುರೈಯ್ಯ ಮೆಲ್ಲನೆ ಕಣ್ಣು ಬಿಟ್ಟು ನೋಡಿ

"ಏನು ಗುಲ್‌ಷನ್ ?"

"ಇನ್ನೆಷ್ಟು ದಿನ ಹೀಗೇ ಕಳೆಯಲು ನಿಶ್ಚಯಿಸಿರುವೆ ?"

"ಸಾಯುವವರೆಗೆ !"

"ನಿನ್ನ ಸಾವು ಬದುಕನ್ನೇ, ಬಹಾದೂರನ ಸಾವು ಬದುಕು ಅಶ್ರಯಿ ಸಿದೆಯೆಂಬುದನ್ನು ಮರೆತೆಯಾ ?"

"ಬಹಾದೂರ್ ಹೇಗಿದ್ದಾರೆ ?"

"ಚೆನ್ನಾಗಿದ್ದಾರೆ. ಅವರಿಗೆ ಯಾವ ಕೊರತೆಯೂ ಆಗದಂತೆ ನೋಡಿ ಕೊಳ್ಳಲಾಗಿದೆ— ಸುರೈಯ್ಯಾ – ಸುಲ್ತಾನರ ತಾಳ್ಮೆ ಮೀರುತ್ತಿದೆ. ಹೆಚ್ಚು ಕಾಲ ಅವರನ್ನು ಸಂದಿಗ್ಧಕ್ಕೆ ಸಿಕ್ಕಿಸುವುದು ಒಳ್ಳೆತಲ್ಲ ಎಂದು ನನ್ನ ಭಾವನೆ."

"..............."

"ನಾನೊಂದು ಅಪ್ರಿಯ ವಾರ್ತೆ ಹೇಳಲು ಬಂದಿದ್ದೇನೆ."

ಭಯಗ್ರಸ್ಥಳಾದ ಸುರೈಯ್ಯಾ

"ಏನದು ಗುಲ್‌ಷನ್" ಎಂದಳು.

"ನಿನ್ನ ವಿಷಯ ಇವತ್ತು ಇತ್ಯರ್ಥವಾಗಲೇಬೇಕೆಂದು ಸುಲ್ತಾನರು ಹಟ ಹಿಡಿದಿದ್ದಾರೆ."

"ಇತ್ಯರ್ಥವಾಗದಿದ್ದರೆ....?"

"ಬಹಾದೂರ್ ಖಾನನಿಗೆ ಮರಣದಂಡನೆ."

"ಗುಲ್‌ಷನ್ !!!"

"ಹೌದು ಸುರೈಯ್ಯಾ – ಸುಲ್ತಾನರೇ ಈಗ ಬಂದು ನಿನ್ನನ್ನು ಕಂಡು ಮಾತನಾಡುತ್ತಾರೆ."

"ಇಲ್ಲಿಗೆ ಬರುತ್ತಾರೆಯೇ ?"

"ಸಿದ್ಧವಾಗಿ ಕುಳಿತಿದ್ದಾರೆ. ನಿನಗೆ ತಿಳಿಸಿ ಬರಲು ನನ್ನನ್ನು ಕಳಿಸಿದರು. ಏಳು – ವಸ್ತ್ರಭೂಷಣ ಬದಲಿಸಿ, ಅವರನ್ನು ಸ್ವಾಗತಿಸಲು ಸಿದ್ಧಳಾಗು."

ದಿಟ್ಟತನದಿಂದ ಮೇಲಕ್ಕೆದ್ದ ಸುರೈಯ್ಯಾ

"ಬರಲಿ ಗುಲ್‌ಷನ್ – ನಾನಿರುವಂತೆಯೇ ನೋಡಲು ಬಯಸುವ ದಾದರೆ ಬರಬಹುದು."

“ ನಿನ್ನ ಇಚ್ಛೆ ”

ಎಂದು ಹೇಳಿ ಗುಲ್‌ಷನ್ ಹೋದ ಕೆಲವು ನಿಮಿಷಗಳಲ್ಲಿ ರ್ವಾಲಂಕಾರಭೂಷಿತರಾದ ಸುಲ್ತಾನ್ ಮುಹಮುದರು ಬಂದು, ಬಾಗಿಲು ಳಿ ನಿಂತು ಸುರೈಯ್ಯಳನ್ನು ಎವೆಯಿಕ್ಕದೆ ನೋಡಿದರು.

ಕಾಡುಕುಸುಮದಂತೆ ಅನಲಂಕೃತಳಾಗಿದ್ದ ಸುರೈಯ್ಯಳನ್ನು ಕಂಡ ಲ್ತಾನರ ಎದೆ ಉದ್ವೇಗದಿಂದ ಹೊಡೆದುಕೊಳ್ಳಲಾರಂಭಿಸಿತು.

ಮೆಲ್ಲನೆ ಬಂದವರು ಸುರೈಯ್ಯಳ ಪಲ್ಲಂಕದ ಮೇಲೆ ಕುಳಿತರು.

ಸುರೈಯ್ಯ ದೊರೆಗೆ ಮುಜುರೆ ಮಾಡಿ ಸ್ವಲ್ಪದೂರ ಸರಿದು ನಿಂತಳು.

“ ಸುರೈಯ್ಯಾ........”

“ .....................”

“ ಕೋಪ ನಿನ್ನ ಮುಖದ ಚೆಲುವನ್ನೇರಿಸಿದೆ ಸುಂದರಿ.”

“ ................”

“ ನಾನೊಬ್ಬ ಸೈತಾನ್ ಎಂದು ಭಾವಿಸಿರುವೆಯಲ್ಲವೇ ?”

“ ಇಲ್ಲ ಖಾವಂದ್ – ತಾವು ಬಹಮನಿರಾಜ್ಯದ ಸುಲ್ತಾನರು – ಸಹ ಸ್ರರು ಪ್ರಜೆಗಳ ಮಾಬಾಪ್.”

“ ಕಾಡುಗಿಣಿ ಮಾತೂ ಬಲ್ಲುದು.”

“ ಕಾಡಿನ ಮಾತು ಬಲ್ಲುದು ಖಾವಂದ್ – ಷಹರುಗಳ ಕಪಟ ನ್ನರಿಯದು.”

“ ಷಹರುಗಳಲ್ಲೇ ಬೆಳೆದರೂ ನಾನು ಕಾಪಟ್ಯವನ್ನರಿಯೆ ಸುರೈಯ್ಯಾ.”

ಸುರೈಯ್ಯ ಸ್ವಲ್ಪ ಮುಂದೆ ಬಂದು, ಮೊಂಡಿಯೂರಿ ಕುಳಿತು

“ ಷಹನ್‌ಷಾ – ನೀವು ರಾಜ್ಯಾಧೀಶರು – ಲಕ್ಷಾಂತರ ಪ್ರಜೆಗಳ ಮಾನ, ಪ್ರಾಣಗಳ ಒಡೆಯರು. ಖುದಾ ನಿಮಗೆ ಸಕಲ ಸಂಪತ್ತು, ಭಾಗ್ಯ ಕರುಣಿಸಿದ್ದಾನೆ. ಅಧಿಕಾರ, ಶ್ರೀಮಂತಿಕೆ, ಯೌವನ ಎಲ್ಲವೂ ಮಗಿದೆ – ನಾನೊಬ್ಬಳು ದೀನಾನಾಥೆ. ನನ್ನ ಸರ್ವಸ್ವವೂ ನನ್ನ ಖಾನ್— ರೆಗೊಡ್ಡಿ ಬೇಡುತ್ತಿದ್ದೇನೆ. ಪತಿಭಿಕ್ಷೆ ನೀಡಿ – ನಾನೂ ನನ್ನ ಪತಿ ಸ್ತಾಂಬೂಲಿಗೆ ಹೋಗಲು ಅಪ್ಪಣೆಕೊಡಿ.”

“ ಅದೊಂದನ್ನುಳಿದು ನೀನು ಏನು ಹೇಳಿದರೂ ಮಾಡಲು ಸಿದ್ಧನಿದ್ದೇನೆ ರೈಯ್ಯಾ. ಕೆಲವು ದಿನಗಳ ಹಿಂದೆ ನಿನ್ನನ್ನು ಮಾರುವೇಷದಲ್ಲಿ ನೋಡಿ ರಭ್ಯ ನಾನು ಹುಚ್ಚನಾಗಿದ್ದೇನೆ. ನನ್ನ ಅಧಿಕಾರ, ಶ್ರೀಮಂತಿಕೆ

ಯೌವನವೆಲ್ಲವನ್ನೂ ನಿನ್ನ ಪದತಲದಲ್ಲಿ ಅರ್ಪಿಸಲು ಸಿದ್ಧನಾಗಿದ್ದೇ ಸುರೈಯ್ಯಾ - ನಿನ್ನ ಖಾನನ ಕೂದಲು ಕೊಂಕದಂತೆ ಅವನನ್ನು ಊ ಕಳಿಸಿಕೊಡುತ್ತೇನೆ - ಜೀವಾವಧಿ ಅವನು ಸುಖವಾಗಿರಲು ವ್ಯ ಮಾಡುತ್ತೇನೆ—ನೀನು ಮಾತ್ರ...."

"ಇದು ಧರ್ಮವೇ ಹುಜೂರ್ ?"

"ಧರ್ಮರಕ್ಷಣೆಗಾಗಿ ನಾನು ಜೀವವನ್ನೇ ಪಣವಾಗಿಟ್ಟಿಲ್ಲವೇ ? ಇ ಕೆಲವೇ ದಿನಗಳಲ್ಲಿ ನಾನು ವಿಜಯನಗರ, ಓರುಗಲ್ಲಿನ ಅರಸರ ಮೆ ಸೆಣಸಬೇಕಾಗಿದೆ. ಮನೋವ್ಯಾಕುಲದಿಂದ ಝರ್ಝರಿತನಾಗಿ ಯು ರಂಗಕ್ಕೆ ನಾನು ಇಳಿದರೆ ಜಯ ದೊರೆತೀತೇ?—ಜನಾನಾದ ಪ್ರಥ ಸ್ಥಾನ ನಿನಗೆ ಮೀಸಲಾಗಿಡುತ್ತೇನೆ. ನಾನು ನಿನ್ನ ಆಜ್ಞಾಧಾರಕನಾಗಿ ತ್ತೇನೆ. ನನ್ನ ಮೋಹದರಗಿಣಿಗೆ ಯಾವ ಕೊರತೆಯೂ ಆಗದ ನೋಡಿಕೊಳ್ಳುತ್ತೇನೆ—ನಿನ್ನನ್ನು ಬಿಟ್ಟಿರಲಾರೆ ಸುರೈಯ್ಯಾ - ಬಿ ಬದುಕಲಾರೆ."

"ರಾಜ್ಯವಾಳುವವರು ಇಷ್ಟು ದುರ್ಬಲವಾದರೆ ರಾಜ್ಯದ ಗತಿಯೇ ಹುಜೂರ್ ?"

"ರಾಜ್ಯವಾಳುವ ದುರ್ಬಲನನ್ನು ಸಬಲನನ್ನಾಗಿಸುವುದು ನಿ ಮಾದಕ ಸೌಂದರ್ಯ."

"ಅದು ಕ್ಷಣಿಕ. ರೋಗರುಜೆಗಳಿಂದ, ವಯೋಧರ್ಮದಿಂದ ಸೌಂದರ್ಯ ಅಳಿಸಿಹೋಗುತ್ತದೆ."

"ಸುಲ್ತಾನನ ಹೃದಯದಲ್ಲಿರುವ ಅನುರಾಗಕ್ಕೆ ರೋಗರು ಮುಪ್ಪಡಸುವುದಿಲ್ಲ."

"ಹುಜೂರ್ - ಜನಾನಾಕ್ಕೆ ಬಂದ ಹೆಣ್ಣುಮಕ್ಕಳಿಗೆಲ್ಲಾ ಇ ಮಾತು ನೀವು ಹೇಳುತ್ತ ಬಂದಿರುವಿರಿ ?"

"ಇಲ್ಲ ಸುರೈಯ್ಯಾ - ಯಾರಿಗೂ ನಾನು ಹೀಗೆ ಮನಸ್ಸನ್ನೊ ಸಿರಲಿಲ್ಲ."

"ಗುಲ್‌ಷನ್...."

"ಅವಳು ವಸಂತಕಾಲದ ತಂಗಾಳಿ; ನೀನು ವರ್ಷಾಕಾಲದ ಝಂಝ ಮಾರುತ — ಅವಳು ಪ್ರಶಾಂತ ಪ್ರೇಮಿನಿ; ನೀನು ಪ್ರಚಂಡ ಪ್ರಣಯಿ ಅವಳು ಜೀವನದ ನೌಕೆ; ನೀನು ನೌಕೆಯನ್ನು ಮುನ್ನಡೆಸುವ ಅಲೆ

ರಾಶಿ — ಹೆಚ್ಚೇನು - ಗುಲ್‌ಷನಳದ್ದು ಮಧುರ ಮಮತಾಪೂರ್ಣ ಮಾತೃ ಪ್ರೇಮ ; ನಿನ್ನದು ಹೃದಯಾಬ್ಧಿಯನ್ನು ಕಡೆದಿಕ್ಕುವ ರುದ್ರಪ್ರಣಯ."

"ರಾಜ್ಯದ ಶಾಂತಿಗೆ ಮಾತೃಪ್ರೇಮ ಬೇಕು ಹುಜೂರ್."

"ರಾಜನ ಮನಃಶಾಂತಿಗೆ ರುದ್ರಪ್ರಣಯ ಬೇಕು ಸುರೈಯ್ಯಾ ಇಲ್ಲಿ ನೋಡು ಚಿನ್ನೆ - ಸುಲ್ತಾನ್ ಮಹಮುದ್ ಬಹಮನಿ ರಾಜ್ಯವನ್ನಾಳಿಕೊಂಡು ಕಾಲ ಹಾಕುವುದರಲ್ಲಿ ತೃಪ್ತನಾಗಿರುತ್ತಾನೆಂದು ಭಾವಿಸಬೇಡ. ಬಹಮನಿಯ ಪ್ರಬಲ ಶತ್ರುವೆಂದರೆ ವಿಜಯನಗರ. ವಿಜಯನಗರವನ್ನು ವಿಧ್ವಂಸನಗೊಳಿಸಿದೆ ನೆಂದರೆ ಇಡಿಯ ದಕ್ಷಿಣಾಪಥ ನನ್ನ ಕರತಲಾಮಲಕ. ದಕ್ಷಿಣದಲ್ಲೊಮ್ಮೆ ನಿರ್ವಿಘ್ನವಾಗಿ, ನಿರಾಪದವಾಗಿ ಇಸ್ಲಾಮಿನ ಅರ್ಧಚಂದ್ರ ಬೆಳಗಿದನೆಂದರೆ, ಉತ್ತರ ಕೈವಶಪಡಿಸಿ ಕೊಳ್ಳುವುದು ಸುಲಭವಾದ ವಿಚಾರ. ದಿಲ್ಲಿಯಲ್ಲಿ ಆಳುತ್ತಿರುವ ತೊಘಲಕಮನತನ ತನ್ನ ಅಂತ್ಯದೆಸೆಯಲ್ಲಿದೆ. ಫಿರೋಜ್ ತೊಘಲಕ್ಕರು ದುರ್ಬಲರಾಗಿರುವುದಲ್ಲದೆ, ರಾಜ್ಯದ ಒಳಜಗಳ ದಿಲ್ಲಿಯ ಸುಲ್ತಾನ್‌ಶಾಹಿಯ ಅಸ್ತಿತ್ವವನ್ನೇ ಅಳ್ಳಾಡಿಸುತ್ತಿದೆ. ಇಡಿಯ ಮುಸ್ಲಿಮ ಭಾರತ ಈಗ ಒಬ್ಬ ಮಹಾ ನಾಯಕನನ್ನು ನಿರೀಕ್ಷಿಸುತ್ತಿದೆ.ಅವನಿಗೆ ಮುಸ್ಲಿಮ ಭಾರತವೆಲ್ಲಾ ಶರಣಾಗುವುದಲ್ಲದೆ ಹಿಂದೂಭಾರತ ಹೇಳ ಹೆಸರಿಲ್ಲವಾಗುತ್ತದೆ— ನಿನ್ನ ಮಹಮುದನೇ ಆ ಮಹಾನಾಯಕ - ಅವನೇ ಸಂಯುಕ್ತಭಾರತದ ಮಹಾ ಸಮ್ರಾಟ್ - ಅವನ ಪ್ರೇಯಿಸಿ ಸುರೈಯ್ಯಳೇ ಮಹಾ ಸಾಮ್ರಾಜ್ಞಿ."

ಸುಲ್ತಾನರು ಕಲ್ಪಿಸಿದ ಚಿತ್ರ ಸುರೈಯ್ಯಳನ್ನು ದಂಗುಬಡಿಸಿತು.

ಮಹಾಸಾಮ್ರಾಜ್ಞಿ !

ಇಸ್ತಾಂಬೂಲಿನ ಕಾಸ್ದಾರನ ಹೆಂಡತಿ ಭಾರತದ ಮಹಾ ಸಾಮ್ರಾಜ್ಞಿ !!

ಈ ಚಿತ್ರದ ಗುಂಗಿನಲ್ಲಿ ಸುರೈಯ್ಯಾ ಮೈಮರೆತಿದ್ದಾಗ, ಸುಲ್ತಾನರೆದ್ದು ಅವಳ ಕೈ ಹಿಡಿದರು.

ಸುರೈಯ್ಯಳ ಕೈ ಕೊಡವಿಕೊಳ್ಳುವ ಪ್ರಯತ್ನ ನಿಷ್ಫಲವಾಯಿತು.

ಸುಲ್ತಾನರ ವೀರಬಾಹುಗಳು ಅವಳನ್ನು ಬಳಸಿದವು.

ಪ್ರಣಯೋತ್ಕಂಠಿತರಾಗಿದ್ದ ಸುಲ್ತಾನರ ಕ್ಷುದಿತಾಧರಗಳು ಸುರೈಯ್ಯಳ ತುಂಬು ತುಟಿಗಳ ರಸವರ್ಷವನ್ನು ಹೀರಿದವು.

ಹರ್ಷಗೊಂಡ ಸುಲ್ತಾನರು ಚಪ್ಪಾಳೆ ತಟ್ಟಲು ಗುಲ್‌ಷನ್ ಮತ್ತಿತರ ಸೇವಿಕೆಯರು ಬಂದರು.

"ಸುರೈಯ್ಯ ಬೇಗ ಸ್ನಾನ ಮುಗಿಸಿ, ಹೊಸ ವಸ್ತ್ರಗಳನ್ನು ಧರಿಸಿ ಸಿದ್ಧವಾಗಲಿ. ನಾನು ದಾವತ್ತಿನ ವ್ಯವಸ್ಥೆ ಮಾಡುತ್ತೇನೆ."

ಎಂದು ಆಜ್ಞೆಮಾಡಿ ಹೊರಡುವ ಮುನ್ನ

"ಗುಲ್ – ಪನ್ನೀರಿನಲ್ಲೇ ಸುರೈಯ್ಯಳ ಸ್ನಾನವಾಗಲಿ"

ಎಂದು ಸೂಚಿಸಿದರು.

೧೪

ನೂತನ ಪರಿಸ್ಥಿತಿಗೆ ಹೊಂದಿಕೊಳ್ಳುವುದು ಸುರೈಯ್ಯಳಿಗೆ ತೊಂದರೆಯಾಯಿತಾದರೂ ಅಸಾಧ್ಯವಾಗಲಿಲ್ಲ.

ಸುಲ್ತಾನರು ಸುರೈಯ್ಯಳಿಗಿತ್ತಿದ್ದ ಆಶ್ವಾಸನ ಪೂರೈಸಿದ್ದರು. ಬಹಾದೂರ್‌ಖಾನ್ ಅಬಾಧಿತನಾಗಿ ಇಸ್ತಾಂಬೂಲ್ ಸೇರಿದ್ದ.

ದಿನಗಳೆದಂತೆ ಸುಲ್ತಾನರಿಗೆ ಸುರೈಯ್ಯಳ ಮೇಲೆ ವ್ಯಾಮೋಹ ಹೆಚ್ಚಿತಲ್ಲದೆ ಕುಂದಲಿಲ್ಲ. ಸುಲ್ತಾನರು ವೈಹಾಳಿ ಹೋಗಲಿ, ಬೇಟೆಗೆ ಹೋಗಲಿ ಜತೆಯಲ್ಲಿ ಸುರೈಯ್ಯ ಇರಬೇಕು; ಸುಲ್ತಾನರ ಊಟೋಪಚಾರಗಳನ್ನು ಸುರೈಯ್ಯಳೇ ನೋಡಿಕೊಳ್ಳಬೇಕಾಗಿತ್ತು. ಸುಲ್ತಾನರು ಒಡ್ಡೋಲಗದಲ್ಲಿದ್ದರೂ ಸುರೈಯ ಅವರ ಹಿಂದೆ ತೆರೆಯ ಮರೆಯಲ್ಲಿ ಕುಳಿತಿರುತ್ತಿದ್ದಳು. ರಾಜ್ಯದಲ್ಲಿ ಯಾವ ಕೆಲಸವಾಗಬೇಕಾದರೂ, ಸುರೈಯ್ಯಳ ಮರೆಹೊಗದೆ ಗತ್ಯಂತರವೇ ಇರಲಿಲ್ಲ.

ಸುಲ್ತಾನರ ಬುದ್ಧಿ, ಮನಸ್ಸುಗಳೆರಡರ ಮೇಲೂ ಸುರೈಯ್ಯ ಸ್ಥಾಪಿಸಿದ್ದ ಸರ್ವಾಧಿಕಾರ ಕಂಡು ಒಳಗಿಂದೊಳಗೇ ಅಸೂಯೆಪಡುತ್ತಿದ್ದವನು ವಕೀಲ್ ಅಸ್ ಸಲ್ತಾನಾ ಆಗಿದ್ದ ದಿಲಾವರ್‌ಖಾನ್. ದಿಲಾವರ್ ವಿಕ್ರಮಶಾಲಿಯಾಗಿದ್ದುದಲ್ಲದೆ ರಾಜ್ಯದ ಆಧಾರಸ್ತಂಭದಲ್ಲಿ ಒಬ್ಬನಾಗಿದ್ದ. ಸುಲ್ತಾನರು ಕೂಡ ಅವನ ವಿಷಯದಲ್ಲಿ ಗೌರವವಾಗಿ ನಡೆದುಕೊಳ್ಳುತ್ತಿದ್ದರು.

ಒಂದು ದಿನ ಸುಲ್ತಾನರ ಒಡ್ಡೋಲಗ ಸೇರಿದೆ. ವಜೀರಿಕುಲ್

ಆಗಿದ್ದ ಸಿಕಂದರ್‌ಖಾನ್ ಎದ್ದು ನಿಂತು ಸುಲ್ತಾನರಿಗೆ ಮುಜರೆ ಮಾಡಿ

"ಮಿಕ್ಕ ವಿಷಯಗಳನ್ನು ಇಂದು ಪರ್ಯಾಲೋಚಿಸುವ ಮುನ್ನ ವಿಜಯ ನಗರದರಸರು ಶ್ರೀ ಬುಕ್ಕರಾಯರಿಂದ ಬಂದಿರುವ ಪತ್ರ ಹುಜೂರ್‌ರವರ ಗಮನಕ್ಕೆ ತರಬೇಕಾಗಿದೆ." ಎಂದ.

"ಪತ್ರ ಓದಿ ವಜೀರರೇ."

ಸಿಕಂದರ್‌ಖಾನ್ ಪತ್ರ ಓದಿ ಮುಗಿಸಲು ಕೊತ್ವಾಲನಾಗಿದ್ದ ಶಂಷುದ್ದೀನ್ ಮುಜಫರ್ ಸಿಡಿದೆದ್ದು

"ವಿಜಯನಗರದ ನರಿ, ಬಹಮನಿಯ ಷೇರನನ್ನು ಕಾಲು ಕೆರೆದು ಜಗಳಕ್ಕೆ ಕರೆಯುತ್ತಿದೆ ಜಹಾಪನಾ. ಈ ಬುಕ್ಕರಾಯ ಮಹಾ ಉದ್ಧಟ. ಹಿಂದೂಸ್ಥಾನದ ಮುಸ್ಲಿಮರಾಜ್ಯಗಳನ್ನೆಲ್ಲಾ ನಾಶಗೊಳಿಸಲು ಶಪಥ ಮಾಡಿರುವನಂತೆ. ಅವನ ಔದ್ಧತ್ಯಕ್ಕೆ ನಾವೀಗಲೇ ಶಾಸನಮಾಡಬೇಕು."

ಸುಲ್ತಾನರು ನಸುನಗುತ್ತಾ

"ಶ್ರೀ ಬುಕ್ಕರಾಯರೂ ನಮ್ಮ ಹಾಗೇ ಮಹತ್ವಾಕಾಂಕ್ಷಿಗಳಾಗಿದ್ದಾರೆ ಮುಜಫರ್ - ಅದರಲ್ಲಿ ತಪ್ಪೇನು. ಇಡಿಯ ಹಿಂದೂಸ್ಥಾನದ ಮೇಲೆ ನಮ್ಮ ಅರ್ಧಚಂದ್ರ ಬೆಳಗಬೇಕೆಂದು ನಾವು ಆಶಿಸುತ್ತಿದ್ದೇವೆ - ಅವರು ತಮ್ಮ ವರಾಹಲಾಂಛನವನ್ನು ಮೆರೆಸಲು ಆತುರರಾಗಿದ್ದಾರೆ. ಬುಕ್ಕರಾಯರ ಉದ್ದೇಶವೇನೇ ಇದ್ದರೂ ಅವರ ಪತ್ರದ ಒಕ್ಕಣೆ ಗಂಭೀರವಾಗಿದೆ. ಅವರು ನಮ್ಮ ಸ್ನೇಹ, ವಿಶ್ವಾಸ ಬಯಸುತ್ತಿದ್ದಾರೆ."

"ವಿಶ್ವಾಸ, ಸ್ನೇಹ ಬಯಸುವವರು ನಮ್ಮ ರಾಜ್ಯದ ಕೆಲವು ಭಾಗಗಳು ಬೇಕೆಂದು ಕೇಳುತ್ತಿರಲಿಲ್ಲ."

"ಈ ತೋರಿಕೆಯ ವಿನಯದ ಹಿಂದೆ ಬೆದರಿಕೆ ಇದೆ ಜಹಾಪನಾ - ಒಳ್ಳೆಯ ಮಾತಿನಲ್ಲಿ ಕೃಷ್ಣಾನದಿಯ ಸುತ್ತಮುತ್ತಲಿನ ಭಾಗಗಳನ್ನು ಬಿಟ್ಟು ಕೊಡಿ – ಇಲ್ಲವಾದರೆ........ಎನ್ನುವುದೇ ಪತ್ರದ ಧ್ವನಿಯಾಗಿದೆ."

ಎಂದು ಸಿಕಂದರ್ ವ್ಯಾಖ್ಯಾನ ಮಾಡಿದ.

ಸುಲ್ತಾನರು ಮಂದಸ್ಮಿತರಾಗಿ

"ನಮ್ಮ ರಾಜ್ಯದ ಒಂದು ಅಂಗಲದ ಭೂಮಿಯನ್ನೂ ಬಿಟ್ಟುಕೊಡಲು ನಾವು ಸಿದ್ಧವಾಗಿದ್ದೇವೆಂದು ಭಾವಿಸುವಿರಾ ಸಿಕಂದರ್‌ಖಾನ್. ವಿಜಯ ನಗರದ ದೊರೆಗಳ ಪತ್ರದ ಧ್ವನಿಯನ್ನೇ ಅನುಕರಿಸಿ ಅವರಿಗೆ ಉತ್ತರ ಬರೆಯಿರಿ."

“ ತಾವೇ ಅಪ್ಪಣೆ ಮಾಡಬೇಕು.”

“ ಒಳ್ಳೆಯದು.”

ಎಂದು ಸುಲ್ತಾನರು ಹೇಳಿದೊಡನೆಯೇ ದರ್ಬಾರಿನ ದುಬಾಷಿ ಸಾಲಿಕ್ ಪತ್ರ ಲೇಖನ ಸಾಮುಗ್ರಿಗಳನ್ನು ಹಿಡಿದು ನಿಂತ.

ಸುಲ್ತಾನರು ಅನುಕೂಲ ಮುದ್ರೆಯಲ್ಲಿ ಕುಳಿತರು. ಪಕ್ಕದಲ್ಲಿ ಪಂಕ ಹಾಕುತ್ತಿದ್ದ ದಾಸಿ ಅವರ ಬೆನ್ನಿಗೆ ಸರಿಯಾಗಿ ಲೋಡು ಆನಿಸಿದಳು. ಇನ್ನೊಬ್ಬ ದಾಸಿ ಹುಕ್ಕಾದ ನಳಿಗೆ ತಂದು ಸುಲ್ತಾನರ ಕೈಗಿತ್ತಳು.

ಸುಲ್ತಾನರು ಹುಕ್ಕ ಎಳೆಯಲು, ಪಾತ್ರೆಯಲ್ಲಿದ್ದ ಪರಿಮಳೋದಕ ಗುಡು ಗುಡಿಸಿತು.

“ ಮಹಾರಾಜಾದಿರಾಜ, ರಾಜ ಪರಮೇಶ್ವರ ವಿಜಯನಗರ ಸಂಸ್ಥಾ ನಾಧೀಶ್ವರರಾದ ಶ್ರೀ ಶ್ರೀ ಬುಕ್ಕರಾಯರ ಸ||ಕ್ಕೆ. ಬಹುಮನಿ ರಾಜ್ಯದ ಸುಲ್ತಾನರೂ, ಇಸ್ಲಾಂ ಧರ್ಮ ರಕ್ಷಕರೂ ಆದ ಷರ್ಹಷಾ ಸುಲ್ತಾನ್ ಮಹಮದ್ ಅವರ ಅನೇಕ ಸಲಾಮುಗಳು.

ತಾವು ವಿಶ್ವಾಸಪೂರ್ವಕವಾಗಿ ಅಪ್ಪಣೆ ಕೊಡಿಸಿದ ಪತ್ರ ಕೈ ಸೇರಿತು. ಅಲ್ಲಾನ ಕೃಪೆಯಿಂದ ತಾವೂ, ರಾಣಿವಾಸದವರೂ ತಮ್ಮ ಸಮಸ್ತ ಪ್ರಜರೂ ಆರೋಗ್ಯವಾಗಿರುತ್ತೀರೆಂದು ನಂಬಿದ್ದೇವೆ.

ತಮ್ಮ ನಮ್ಮ ಹಿರಿಯರು ಶಾಂತಿಸ್ಥಾಪನೆಗಾಗಿ ಮಾಡಿದ ಪ್ರಯತ್ನ ವನ್ನು ತಾವು ಪ್ರಸ್ತಾಪಿಸಿರುವುದು ಯಥೋಚಿತವಾಗಿದೆ. ಅವರ ವಂಶಜ ರಾದ ನಾವು ಅವರ ಹಿರಿಯ ಮೇಲ್ಪಂಕ್ತಿಯನ್ನನುಸರಿಸುವುದು ಯೋಗ್ಯ ವೆನ್ನುವುದರಲ್ಲಿ ಸಂದೇಹವೇ ಇಲ್ಲ.

ಕೃಷ್ಣಾನದಿಯ ಸುತ್ತಮುತ್ತಲಿನ ಪ್ರದೇಶಗಳನ್ನು ನಾವು ಬಿಟ್ಟು ಕೊಡಬೇಕೆಂದು ತಾವು ಸೂಚಿಸಿರುವಿರಿ. ಈ ಸೂಚನೆ ನಮಗೆ ಆಶ್ಚರ್ಯ ವನ್ನುಂಟು ಮಾಡಿದೆ. ರಾಯಚೂರು, ಮುದಕಲ್ಲಿನ ಸಮೀಪದ ಪ್ರದೇಶ ಗಳೂ, ಓರುಗಲ್ಲು ನಮಗೆ ನ್ಯಾಯವಾಗಿ ಸೇರಬೇಕು. ಆ ಭಾಗಗಳನ್ನು ತಾವೂ ಓರುಗಲ್ಲಿನ ಶ್ರೀ ವಿನಾಯಕ ದೇವರೂ ನಮಗೆ ಬಿಟ್ಟುಕೊಟ್ಟು ನಮ್ಮ ಸ್ನೇಹವನ್ನು ಭದ್ರಪಡಿಸಬೇಕಾಗಿ ಪ್ರಾರ್ಥನೆ.

ದುರ್ದೈವವಶಾತ್ ತಾವು ನಮ್ಮ ಪ್ರಾರ್ಥನೆ ನಿರಾಕರಿಸುವುದಾದರೆ ಅನಿವಾರ್ಹಕವಾಗಿ ನಾವು ಮುಂದಿನ ಕ್ರಮ ಜರುಗಿಸಿ, ನಮಗೆ ನ್ಯಾಯ

ವಾಗಿ ಸಲ್ಲಬೇಕಾದ ಹಕ್ಕು ಬಾಧ್ಯತೆಯನ್ನು ಸ್ಥಾಪಿಸಿಕೊಳ್ಳಬೇಕಾಗುತ್ತದೆ. ರಾಜ್ಯಶಾಸ್ತ್ರವಿಶಾರದರಾದ ತಾವು ಇಷ್ಟಕ್ಕೆ ಅವಕಾಶ ಕೊಡುವುದಿಲ್ಲವೆಂದು ಧೃಢವಾಗಿ ನಂಬಿರುವ,

ನಿಮ್ಮ ದೋಸ್ತ್ "ಸುಲ್ತಾನ್ ಮಹಮುದ್"

ಪತ್ರ ಸಿದ್ಧವಾದೊಡನೆಯೇ ಸುಲ್ತಾನರು ತಮ್ಮ ಮುದ್ರೆಯುಂಗರದಿಂದ ಮುದ್ರೆಯೊತ್ತಿ

"ಪತ್ರ ಎಲ್ಲರಿಗೂ ಒಪ್ಪಿಗೆಯಾಗಿದೆಯಷ್ಟೆ !" ಎಂದರು.

ಸಿಕಂದರ್ ಬೊಗ್ಗಿ ಬೊಗ್ಗಿ ಸಲಾಮು ಮಾಡುತ್ತ

"ತಮ್ಮ ಉತ್ತರ ಕಂಡ ಕೂಡಲೆ ವಿಜಯನಗರದವರು ತತ್ತರಿಸಿ ಹೋಗುತ್ತಾರೆ ಜಹಾಪನಾ" ಎಂದ.

"ಶತ್ರುಬಲ ಎಷ್ಟೇ ಇರಲಿ, ಅದನ್ನು ಉಪೇಕ್ಷಿಸುವುದು ಜಾಣತನವಲ್ಲ ಸಿಕಂದರ್ ಖಾನ್. ವಿಜಯನಗರದವರು ವೀರಾವೇಶದಿಂದ ರಾಜ್ಯ ವಿಸ್ತರಣೆಗೆ ಹೊರಟಿದ್ದಾರೆ. ಅವರ ಸೈನ್ಯಬಲ, ಮನೋಬಲ ಎರಡನ್ನೂ ನಾವು ಗಮನಕ್ಕೆ ತಂದುಕೊಳ್ಳಬೇಕು. ಪತ್ರವನ್ನು ಸರಿಯಾದವರು ತೆಗೆದುಕೊಂಡು ಹೋಗಲಿ" ಎಂದರು.

ವಕೀಲ್ ಅಸ್ ಸಲ್ತಾನಾ ದಿಲಾವರ್ ಖಾನರೆದ್ದು ನಿಂತು

"ಜಹಾಪನಾ, ನನ್ನದೊಂದು ಬಿನ್ನಹವಿದೆ – ಲಾಲಿಸಬೇಕು."

"ಹೇಳಿ. ದಿಲಾವರ್ ಖಾನರೇ."

"ನಾವು ಯುದ್ಧಾತುರರಾಗಿಲ್ಲ. ಶಾಂತಿ, ಸಂಧಾನಗಳಲ್ಲಿ ಆಸಕ್ತರಾಗಿದ್ದೇವೆಂದು ತಮ್ಮ ಮಾರುತ್ತರ ವಿಜಯನಗರದವರಿಗೆ ಭಾವನೆಯನ್ನುಂಟುಮಾಡುತ್ತದೆ. ಈ ಭಾವನೆಯ ಪೂರ್ಣ ಪ್ರಯೋಗವನ್ನು ನಾವು ಪಡೆದುಕೊಳ್ಳಬೇಕು."

"ಹೇಗೆ ?"

"ಓರುಗಲ್ಲಿನ ಶ್ರೀವಿನಾಯಕ ದೇವರೂ ವಿಜಯನಗರದ ಶ್ರೀಬುಕ್ಕರಾಯರೂ ಒಂದು ಗೂಡಿದರೆ ಅವರನ್ನೆದುರಿಸುವುದು ನಮಗೆ ಶ್ರಮಸಾಧ್ಯವಾಗುತ್ತದೆ. ಸಂಧಾನದ ಹೊಗೆಯಾಡುತ್ತಿರುವಾಗಲೇ ನಾವು ಓರುಗಲ್ ಕೈವಶಪಡಿಸಿಕೊಂಡರೆ, ವಿಜಯನಗರದ ಕೀರ್ತಿ ಕೆಚ್ಚಿಗೆ ಪ್ರಬಲ ಧಕ್ಕೆ ತಗಲುತ್ತದೆ. ಒಬ್ಬ ಪ್ರಬಲ ಶತ್ರುವನ್ನು ಮೆಟ್ಟಿದ ಮೇಲೆ ಇನ್ನೊಬ್ಬನನ್ನು ಮೆಟ್ಟು

ವುದು ಕಷ್ಟವಾಗಲಾರದು."

ಸುಲ್ತಾನರು ಕ್ಷಣಕಾಲ ಯೋಚಿಸಿ

"ನಿಮ್ಮೆಲ್ಲರ ಅಭಿಪ್ರಾಯವೇನು ?" ಎಂದರು

"ವಕೀಲ್ ಅಸ್ ಸುಲ್ತಾನಾ ಅವರ ಸಲಹೆ ಯೋಗ್ಯವಾಗಿದೆ ಖಾವಂದ್."

ಎಂದು ಕೊತ್ವಾಲ್ ಮುಜಫರ್ ಹೇಳಿದರು

"ಓರುಗಲ್ಲಿನ ಮೇಲೇರಿ ಹೋಗುವುದಕ್ಕೆ ನಮ್ಮ ಸೈನ್ಯಗಳು ಸಿದ್ಧವಾಗಿಯೇ ?"

"ಸಿದ್ಧವಾಗಿವೆ."

"ಇನ್ ಷಾ ಅಲ್ಲಾ – ಎಷ್ಟು ಬೇಗ ಸಾಧ್ಯವಾದರೆ ಅಷ್ಟು ಬೇಗ ನಮ್ಮ ಸೈನ್ಯಗಳು ಓರುಗಲ್ಲಿನ ಪ್ರಯಾಣ ಬೆಳಸಲಿ"

ಎಂದವರೇ ಮೇಲಕ್ಕೆದ್ದರು.

ಸಭಿಕರು ಉತ್ಸಾಹಗೊಂಡು

"ಅಲ್ಲಾ ಹೋ ಅಕ್ಬರ್"

ಎಂದು ಘೋಷಿಸಿದರು.

ಸುಲ್ತಾನರು ಒಳಗೆ ತೆರಳುವ ಮುನ್ನ ಸುತ್ತಲೊಮ್ಮೆ ಈಕ್ಷಿಸಿ

"ವಿಜಯನಗರದರಸರಿಗೆ ನಾವು ಬರೆದಿರುವ ಪತ್ರವನ್ನು ವಾಲಿ ಮುಹಮುದರು ತೆಗೆದುಕೊಂಡು ಹೋಗಲಿ" ಎಂದರು.

ದುಬಾಷಿ ಸಾಲಿಕ್‌ನಿಂದ ಪತ್ರ ತೆಗೆದುಕೊಂಡು ಸುಲ್ತಾನರಿಗೆ ಮುಜರೆ ಮಾಡಿದ ವಾಲಿ ಮುಹಮುದರನ್ನು ಕಂಡು ಸುಲ್ತಾನರು

"ನನ್ನೊಂದಿಗೆ ಬನ್ನಿ" ಎಂದರು.

ವಜೀರಿಕುಲ್ ಸಿಕಂದರ್ ಖಾನರ ಮಗ ವಾಲಿ ಮುಹಮುದ್, ಸುಲ್ತಾನರಿಗಿಂತ ವಯಸ್ಸಿನಲ್ಲಿ ಸ್ವಲ್ಪ ಚಿಕ್ಕವನಾಗಿದ್ದು ಅವರ ಬಾಲ್ಯದ ಒಡನಾಡಿಯಾಗಿದ್ದ.

ಜನಾನಾ ಪ್ರವೇಶಿಸಿದ ಕೂಡಲೆ ಸುಲ್ತಾನರು ಸುಸ್ನೇಹದಿಂದ ವಾಲಿ ಮುಹಮುದನ ಹೆಗಲ ಮೇಲೆ ಕೈಹಾಕಿ

"ಬಾ ವಾಲಿ"

ಎಂದು ಕರೆದೊಯ್ದು ತಮ್ಮ ಪಲ್ಲಂಕದ ಮೇಲೆ ಕೂಡಿಸಿಕೊಂಡು, ಪಾನ ಬತ್ತು ತರಲು ಆಜ್ಞೆ ಮಾಡಿದರು.

ಸುರೈಯ್ಯ, ಗುಲ್‌ಷನ್ ಷರಬತ್ತಿನ ಬಟ್ಟಲು ಹೂಜಿಗಳೊಂದಿಗೆ ಪ್ರವೇಶಿಸಲು ವಾಲಿ ನಿಂತುಕೊಂಡು ಅವರಿಗೆ ಸಲಾಮು ಮಾಡಿದ.

ಸುಲ್ತಾನರು ಅವನೊಂದಿಗೆ ಷರಬತ್ತು ಸೇವಿಸುತ್ತಾ

"ವಾಲಿ, ನಿನಗೆ ಗುರುತರವಾದ ಕಾರ್ಯ ಒಪ್ಪಿಸುತ್ತಿದ್ದೇನೆ. ಇದನ್ನು ಯಶಸ್ವಿಯಾಗಿ ನೀನು ನಿರ್ವಹಿಸದಿದ್ದರೆ ನಮ್ಮ ರಾಜ್ಯಕ್ಕೆ ಗಂಡಾಂತರ ಒದಗುತ್ತದೆ."

"ಅಪ್ಪಣೆಯಾಗಲಿ ಜಹಾಪನಾ."

"ವಿಜಯನಗರದ ಶ್ರೀ ಬುಕ್ಕರಾಯರೂ ಓರುಗಲ್ಲಿನ ಶ್ರೀ ವಿನಾಯಕ ದೇವರೂ ಕೂಡಿಕೊಂಡು ನಮ್ಮನೆದುರಿಸುವ ಪ್ರಯತ್ನ ನಡೆಸಿರುವರಂತೆ – ಅದಕ್ಕೆ ನಾವು ಅವಕಾಶಕೊಡಬಾರದು. ಈ ಸ್ನೇಹಪತ್ರದೊಂದಿಗೆ ನೀನು ವಿಜಯನಗರಕ್ಕೆ ಹೋಗಿ ಅವರ ಮನಸ್ಸನ್ನು ಗೆಲಿಯಬೇಕು. ನಿನ್ನೊಂದಿಗೆ ಬೇಕಾದಷ್ಟು ಪರಿವಾರ, ಸೇವಕ ಸೇವಿಕೆಯರು, ನರ್ತಕ ನರ್ತಕಿಯರು, ಸಂಗೀತಗಾರರನ್ನು ಕರೆದುಕೊಂಡು ಹೋಗು. ನಾವು ವಿಜಯನಗರದ ಸ್ನೇಹಾಭಿಲಾಷಿಗಳೆಂದು ಶಾಂತಿಪ್ರಿಯರೆಂದು ಅವರ ಮನಸ್ಸಿಗೆ ಖಚಿತವಾಗ ಬೇಕು. ನೀನು ವಿಜಯನಗರದ ಮನವೊಲಿಸುತ್ತಿರುವಲ್ಲಿ ನಾವು ಓರುಗಲ್ಲಿನ ಕತೆ ಮುಗಿಸಿಬಿಡುತ್ತೇವೆ. ಓರುಗಲ್ಲಿನ ವಿದ್ಯಮಾನಗಳನ್ನು ನಾವು ಬೇಹು ಗಾರರ ಮೂಲಕ ತಿಳಿಸುತ್ತಿರುತ್ತೇವೆ. ಸುಸಮಯ ನೋಡಿ, ವಿಜಯ ನಗರದವರಿಗೆ ಅನುಮಾನ ಬರದಂತೆ ಅಲ್ಲಿಂದ ನೀನು ಕಾಲು ಕೀಳಬೇಕು. ಈ ಕೆಲಸವನ್ನು ಎಚ್ಚರಿಕೆಯಿಂದಲೂ ಜಾಣ್ಮೆಯಿಂದಲೂ ನೀನು ನಿರ್ವಹಿಸ ಬೇಕಾಗಿದೆ."

"ಅಪ್ಪಣೆ."

"ವಿಜಯನಗರದ ಬಲಾಬಲವೆಷ್ಟು – ಕೋಟೆ ಕೊತ್ತಳಗಳ ರಕ್ಷಣೆಗೆ ಅವರ ಮಾಡಿರುವ ಏರ್ಪಾಡೇನು – ಸ್ತ್ರೀ ಮೋಹದಿಂದಾಗಲಿ ಧನ ಲೋಭ ದಿಂದಾಗಲಿ ನಮ್ಮ ಪಕ್ಷಕ್ಕೆ ಬರುವ ಜನರಿದ್ದಾರೆಯೇ – ನಾಳೆ ನಾವು ವಿಜಯ ನಗರ ಮುತ್ತಿದಾಗ ಯಾರಿಂದ ಸಹಾಯ ನಿರೀಕ್ಷಿಸಬಹುದು ಎಂಬುದನ್ನೂ ನೀನು ಸೂಕ್ಷ್ಮವಾಗಿ ತಿಳಿದು ನಮಗೆ ವರದಿಮಾಡಬೇಕು."

"ಚಿತ್ತ – ಜಹಾಪನಾ ಅವರಿಗೆ ಯಾವ ರೀತಿಯಲ್ಲಾದರೂ ಸೇವೆ ಸಲ್ಲಿಸುವುದು ನನ್ನ ಭಾಗ್ಯವೆಂದು ಭಾವಿಸಿದ್ದೇನೆ – ಆದರೆ....!"

"ಏನು ಆದರೆ ?"

" ಮಹದ್ವಿಜಯಕ್ಕೆ ತಾವು ಹೊರಟಿರುವಾಗ ನಾನು ತಮ್ಮೊಂದಿಗಿಲ್ಲ ವಲ್ಲಾ ಎಂಬುದೇ ನನ್ನ ಮನಸ್ಸಿನ ಅಳುಕು."

" ಓರುಗಲ್ಲಿನ ದಿಗ್ವಿಜಯ ಮುಗಿಸಿಕೊಂಡು ಬಂದವರೇ ನಾವು ವಿಜಯ ನಗರದತ್ತ ತಿರುಗುತ್ತೇವೆ ವಾಲಿ. ಆ ಮಹಾಸಮರದಲ್ಲಿ ನೀನೇ ನನ್ನ ಬಲಗೈ."

ವಾಲಿ ಪರಮಸಂತುಷ್ಟನಾದ.

ಸುಲ್ತಾನರು ಪರಬತ್ತಿನ ಗುಟುಕುಗಳನ್ನು ಸಾವಕಾಶವಾಗಿ ಸೇವಿಸುತ್ತ

" ಯುದ್ಧದಲ್ಲಿ ಜಯಾಪಜಯ ಅನಿಶ್ಚಿತ ವಾಲಿ."

" ಹೌದು ಹುಜೂರ್."

" ಒಂದು ವೇಳೆ ನಾನು ಯದ್ಧದಲ್ಲಿ ಮಡಿದರೆ...."

" ಅಂಥ ಮಾತು ಹೇಳಬೇಡಿ ಜಹಾಪನಾ."

" ಇರಲಿ – ಕೆಟ್ಟದ್ದನ್ನೇ ಮೊದಲು ಯೋಚಿಸುವುದು ಒಳ್ಳೆಯದು."

" ನಾನು ಮಡಿದರೆ ರಾಜ್ಯದ ಸ್ಥಿತಿ ಏನಾಗುವುದೋ ಕಾಣೆ – ಜನಾನಾ ಸ್ಥಿತಿ ಏನಾಗುವುದೋ ಕಾಣೆ. ಯುವರಾಜ ಮುಜಾಹಿದ್ ಪರಮ ಮಾತೃ ಭಕ್ತ – ಮಾತೃಭಕ್ತಿಯೆಂದರೆ ಪಿತೃದ್ವೇಷವೆಂದು ಅವನು ತಿಳಿದಿರುವ ಹಾಗೆ ಕಾಣುತ್ತದೆ. ನನ್ನ ಆಶ್ರಿತವರ್ಗದಲ್ಲಿರುವ ಸ್ತ್ರೀಯರನ್ನು ಅವನು ಯೋಗ್ಯ ರೀತಿಯಲ್ಲಿ ನಡೆಸಿಕೊಳ್ಳುತ್ತಾನೆಂಬ ಧೈರ್ಯ ನನಗಿಲ್ಲ – ಸುರೈಯ್ಯ ಮತ್ತು ಗುಲ್ ಇಬ್ಬರೂ ನನ್ನ ಎರಡು ಕಣ್ಣುಗಳು. ನನಗೇನಾದರೂ ಅಘಘಾತ ಸಂಭವಿಸಿದರೆ ಇವರಿಬ್ಬರ ರಕ್ಷಣೆ ಪೋಷಣೆ ನೀನು ನೋಡಿಕೊಳ್ಳಬೇಕು. ಒಪ್ಪಿ ಮಾತುಕೊಡುವೆಯಾ ವಾಲಿ. ಯೋಚಿಸಿ ನೋಡು – ಮುಜಾಹಿದನ ವಿರೋಧ ಕಟ್ಟಿಕೊಳ್ಳಬೇಕಾಗಿ ಬಂದರೂ ಬರಬಹುದು."

" ಜಹಾಪನಾ, ನೀವು ನನ್ನ ತಂದೆಯ ಸಮಾನ. ಇವರಿಬ್ಬರೂ ನನ್ನ ತಾಯಂದಿರು. ಯುವರಾಜರೊಬ್ಬರೇ ಅಲ್ಲ – ಇಡಿಯ ಕಲ್ಬುರ್ಗಿಯೇ ನನ್ನ ಎದುರು ನಿಂತರೂ ನಾನು ಇವರನ್ನು ರಕ್ಷಿಸುತ್ತೇನೆ – ತಾವು ನಿಶ್ಚಿಂತರಾಗಿರಿ."

ಅವನ ಆಶ್ವಾಸನ ಕೇಳಿದ ಸುಲ್ತಾನರ ಹೃದಯಕ್ಕೆ ಹಾಲೆರೆದಂತಾ ಯಿತು. ವಾಲಿಯನ್ನಪ್ಪಿ

" ಸುಲ್ತಾನರಿಗೂ ನಚ್ಚಿನ ಗೆಳೆಯರಿದ್ದಾರೆಂಬುದೊಂದು ಸೋಜಿಗ ವಲ್ಲವೇ ವಾಲಿ " ಎಂದರು.

# ೧೫

ಸುಲ್ತಾನ್ ಮಹಮುದ್‌ಷಹಾರವರ ಪ್ರತಿನಿಧಿಗಳಾಗಿ ಬಂದ ವಾಲಿ ಮಹಮುದರನ್ನು ಮಾರಪ್ಪನಾಯಕರೂ, ಮುದ್ದಪ್ಪನಾಯಕರೂ ರಾಜ ಮರ್ಯಾದೆಯೊಡನೆ ಸ್ವಾಗತಿಸಿ, 'ವಸಂತ ಮಹಲಿ'ನಲ್ಲಿ ಅವರ ಮತ್ತು ಅವರ ಪರಿವಾರದ ಬಿಡಾರದ ವ್ಯವಸ್ಥೆ ಮಾಡಿದರು.

ಸಂಜೆಯ ರಾಜಸಭೆಯಲ್ಲಿ ವಾಲಿ ಮಹಮುದ್ ಮಹಾರಾಜಾಧಿರಾಜ ಬುಕ್ಕರಾಯರನ್ನು ಸಂದರ್ಶಿಸುವ ಅವಕಾಶ ಮಾಡಲಾಗಿತ್ತು.

ತುಂಬಿದ ರಾಜಸಭೆಗೆ ಮಹಾರಾಜರು ಆಗಮಿಸಲು ಸಭಾಸದರೆಲ್ಲ ಎದ್ದು ಗೌರವ ಸಲ್ಲಿಸಿದರು. ಕಲ್ಬುರ್ಗಿಯ ರಾಜ ಪ್ರತಿನಿಧಿಗೆ, ಮಹಾರಾಜರ ಸಮೀಪದಲ್ಲಿಯೇ ಪೀಠ ಏರ್ಪಡಿಸಲಾಗಿತ್ತು.

ವಾಲಿ ಮಹಮುದ್, ಮಹಾರಾಜರಿಗೆ ಪರಿಚಯ ಪತ್ರ ಸಲ್ಲಿಸಿ ಅದ ರೊಂದಿಗೆ ನಾಲ್ಕು ಹರಿವಾಣಗಳು ತುಂಬಿದ ಅನರ್ಘ್ಯ ಮುತ್ತು ರತ್ನಗಳನ್ನೊಪ್ಪಿಸಿದ.

ಕುಶಲ ಪ್ರಶ್ನೆಗಳಾದವು.

ವಿಜಯನಗರದ ಆಸ್ಥಾನದ ಗಾಯಕ ಗಾಯಿಕೆಯರು ಹಾಡಿದ್ದು ಮುಗಿಯಲು ವಾಲಿ ಮಹಮುದರು

"ನಮ್ಮ ಆಸ್ಥಾನದ ಕೆಲವು ಗಾಯಕರನ್ನೂ ಗಾಯಿಕೆಯರನ್ನೂ ಕರೆತಂದಿದ್ದೇನೆ. ಅಪ್ಪಣೆಯಾದರೆ ಹಾಡಲು ಹೇಳುತ್ತೇನೆ" ಎಂದರು.

ಮಹಾರಾಜರು ಹಸನ್ಮುಖಿಗಳಾಗಿ

"ಆಗಬಹುದು" ಎಂದರು.

ಕಲ್ಬುರ್ಗಿಯ ಆಸ್ಥಾನದ ಗಾಯನಾಚಾರ್ಯ ಉಸ್ತಾದ್ ಉಲ್ಫತ್ ಆಲಿಖಾನರವರು ಸಮಯೋಚಿತ 'ಭಾಗ್ಯಶ್ರೀ' ರಾಗದಲ್ಲಿ ರಾಗ, ಚೀಸು ಹಾಡಿ ನಿಲ್ಲಿಸಲು ಸುಪ್ರೀತರಾದ ಮಹಾರಾಜರು

" ನಮ್ಮ ಕರ್ನಾಟಕ ಸಂಪ್ರದಾಯಕ್ಕೂ ಉತ್ತರಾದಿ ಸಂಪ್ರದಾಯಕ್ಕೂ ವ್ಯತ್ಯಾಸವೇ ಕಾಣದಲ್ಲ ವಾಲಿಮುಹಮುದರೇ ?" ಎಂದರು.

ವಿನಯಶಾಲಿಯಾದ ವಾಲಿ ಮುಹಮುದ್

" ಸಂಗೀತ ಶಾಸ್ತ್ರದ ವಿಷಯ ನನಗೇನೂ ಗೊತ್ತಿಲ್ಲ ಮಹಾರಾಜ ಸಾಹೇಬ್. ಉಲ್ಫತ್ ಆಲಿಯವರು ದೊಡ್ಡ ವಿದ್ವಾಂಸರು. ಅವರೇ ಅ ಬಗ್ಗೆ ಮಾತನಾಡಲು ಸಮರ್ಥರು "

ಎಂದು ಉಲ್ಫತ್ ಆಲಿಯವರಿಗೆ ಕಣ್ಸೂಚನೆ ಮಾಡಲು, ಉಸ್ತಾದರೆದ್ದು ಬಂದು, ಕೈಕಟ್ಟಿ ಮಹಾರಾಜರ ಮುಂದೆ ನಿಂತು,

" ತಾವು ಅಪ್ಪಣೆಕೊಡಿಸಿದುದು ನಿಜ ಹುಜೂರ್. ಉತ್ತರಾದಿ ಸಂಪ್ರದಾಯ ಈಚಿನದು. ನಿಮ್ಮ ದೇಶದಲ್ಲಿ ರೂಢಿಯಲ್ಲಿರುವ ಸಂಗೀತ ಸಂಪ್ರದಾಯವೇ ತಾಯಿಬೇರು. ಹಿಂದೂಸ್ಥಾನದಲ್ಲೆಲ್ಲಾ ಒಂದು ಕಾಲಕ್ಕೆ ಏಕರೀತಿಯ ಸಂಗೀತವಿದ್ದಿರಬೇಕು. ಹೊರದೇಶಗಳ ಪ್ರಭಾವಕ್ಕೊಳಗಾದ ಉತ್ತರ ಹಿಂದೂಸ್ಥಾನದ ಸಂಗೀತ ಸ್ವಲ್ಪ ರೂಪವ್ಯತ್ಯಾಸ ಹೊಂದಿರಬೇಕು." ಎಂದರು.

ಆ ವೇಳೆಗೆ ಉಲ್ಫತ್ ಖಾನರ ಶಿಷ್ಯೆ ಜೊಹ್ರಾಜಾನ್ ವೇದಿಕೆಯಮೇಲೆ ಬಂದು ಕುಳಿತಿದ್ದಳು. ಸಮಶ್ರುತಿಗೊಂಡಿದ್ದ ಎರಡು ತಂಬೂರಿಗಳು ಝೇಂಕರಿಸುತ್ತಿದ್ದುವು. ಅನುಪಮರೀತಿಯಲ್ಲಿ ಅವಳು ಹಾಡಿದ ' ಶಂಕರ ' ರಾಗ ಸಭಿಕರನ್ನು ಆನಂದಪರವಶರನ್ನಾಗಿ ಮಾಡಿತು.

ಅವಳು ಹಾಡು ಮುಗಿಸಿ ತಂಬೂರಿ ಕೆಳಗಿಡಲು ಮಹಾರಾಜರು ವಾಲಿ ಮುಹಮುದರ ಕಡೆ ತಿರುಗಿ ನಸುನಗುತ್ತಾ

" ನಿಮ್ಮ ಸೈನ್ಯಗಳಿಗೆ ನಾವು ಮಣಿಯುತ್ತೇವೆಯೋ ಇಲ್ಲವೋ ಗೊತ್ತಿಲ್ಲ ವಾಲಿ ಮುಹಮುದರೇ – ಆದರೆ ನಿಮ್ಮ ಕಲಾವಿದರು ವಿಜಯನಗರವನ್ನು ಗೆದ್ದುಬಿಡುತ್ತಾರೆಂದು ನಮಗೆ ಭಯವಾಗುತ್ತಿದೆ."

ಎಂದು ಮಾರಪ್ಪನಾಯಕರ ಕಡೆ ನೋಡಲು, ಅವರು ಮಹಾರಾಜರ ಸಮೀಪಕ್ಕೆ ಬಂದು ನಿಂತರು.

" ವಿದ್ವಾಂಸರಿಗೆ ಯೋಗ್ಯ ಪುರಸ್ಕಾರವಾಗಲಿ. ಕಲ್ಬುರ್ಗಿಯ ವಿದ್ವನ್ಮಣಿ ಗಳನ್ನು ಕರೆದೊಯ್ದು ವಿಚಾರ ವಿನಿಮಯ ಮಾಡಲು ನಮ್ಮ ಆಸ್ಥಾನದ ಸಂಗೀತ ವಿದ್ವಾಂಸರಿಗೆ ತಿಳಿಸಿ. ರಾಜಕೀಯ ಮೈತ್ರಿಯೊಂದಿಗೆ ಸಾಂಸ್ಕೃತಿಕ ಮೈತ್ರಿ ಬೆಳೆದರೆ ನಮ್ಮ ಸಂಬಂಧ ದೃಢಪಡುವುದು " ಎಂದರು.

ರಾಜಸಭೆ ಮುಗಿಯುವ ಮುನ್ನ ವಾಲಿ ಮಹಮುದರೆದ್ದು ಸುಲ್ತಾನರ ಪತ್ರವನ್ನು ಗೌರವಯುತವಾಗಿ ದೊರೆಗಳಿಗೆ ಒಪ್ಪಿಸಲು, ಅದನ್ನು ಸಮೀಪ ದಲ್ಲಿದ್ದ ಮುದ್ದಪ್ಪನಾಯಕರು ಕೈಗೆ ತೆಗೆದುಕೊಂಡರು.

ರಾಜ ಪ್ರತಿನಿಧಿಯನ್ನು ಬೀಳ್ಕೊಟ್ಟಮೇಲೆ ಅರಮನೆಯ ಒಳಹಜಾರದಲ್ಲಿ ಮಂತ್ರಾಲೋಚನ ಸಭೆ ಸೇರಿತು.

ಸುಲ್ತಾನ್ ಮಹಮುದರ ಪತ್ರ ನೋಡಿದ ಸಭಿಕರಲ್ಲಿ ಒಳಗುದಿಯಾರಂಭ ವಾಯಿತು. ಆದರೆ ಯಾರೂ ಸ್ಪಷ್ಟವಾಗಿ ಸುಲ್ತಾನರನ್ನು ಆಕ್ಷೇಪಿಸುವಂತಿರ ಲಿಲ್ಲ. ಸುಲ್ತಾನರಿಗೆ ಕಾಲಾವಕಾಶ ಕೊಡದೆ, ಕಲ್ಬುರ್ಗಿಯ ಮೇಲೇರಿ ಹೋಗಬೇಕೆಂದು ಮಾರಪ್ಪ, ಮುದ್ದಪ್ಪ ನಾಯಕರೂ, ಮಲ್ಲಿನಾಥ ದಣ್ಣಾಯ ಕರೂ ದೊರೆಗಳನ್ನು ಒತ್ತಾಯಪಡಿಸಿದರು.

"ಕಲ್ಬುರ್ಗಿಯ ಮೇಲೇರಿ ಹೋಗುವುದಕ್ಕೆ ನಮಗೆ ಸಾಕಷ್ಟು ಪ್ರಬಲ ಕಾರಣಗಳಿಲ್ಲ. ಆದರೆ ಸುಲ್ತಾನರ ಮರುಳು ಮಾತಿಗೆ ಭ್ರಾಂತರಾಗಿ ನಾವು ಕೈ ಕಟ್ಟಿ ಸುಮ್ಮನೆ ಕೂಡಬಾರದು. ಯುದ್ಧ ಸಿದ್ಧತೆ ಅವಿರತವಾಗಿ ಸಾಗಿರಲಿ. ಸರಿಯಾದ ಕಾರಣ ದೊರತೊಡನೆಯೇ ನಾವು ಕಲ್ಬುರ್ಗಿಯ ಮೇಲೇರಿ ಹೋಗುವ ವಿಚಾರಮಾಡೋಣ."

ಎಂದು ದೊರೆಗಳು ಅಪ್ಪಣೆ ಕೊಡಿಸಿದರು.

ವ್ಯಗ್ರಗೊಂಡಿದ್ದ ದಣ್ಣಾಯಕ ಮಲ್ಲಿನಾಥರೆದ್ದು

"ಈ ಸಮಯದಲ್ಲಿ ರಾಜಪ್ರತಿನಿಧಿ ವಾಲಿ ಮಹಮುದರು ಇಲ್ಲಿ ಬಂದಿರುವುದು ಶುಭ ಸೂಚಕವಾಗಿಲ್ಲ. ನಮ್ಮ ಬಲಾಬಲಗಳ ಪರಿಗಣನೆಗೇ ವಾಲಿ ಮಹಮುದರು ಇಲ್ಲಿ ಬಂದಿದ್ದಾರೆಂದು ನನ್ನ ಸ್ಪಷ್ಟ ಅಭಿಪ್ರಾಯ. ಅವರನ್ನು ಆದಷ್ಟು ಕ್ಷಿಪ್ರವಾಗಿ ಇಲ್ಲಿಂದ ಹೊರಡಿಸುವ ಯೋಚನೆ ಮಾಡಬೇಕಾಗಿದೆ."

"ಅತಿಥಿಭರ್ತ್ಸನ ವಿಜಯನಗರದ ಗೌರವಕ್ಕೆ ಸಲ್ಲದು ದಣ್ಣಾಯಕರೇ."

"ವಾಲಿ ಮಹಮುದರು ಅತಿಥಿಗಳಾಗಿ ಬಂದಿಲ್ಲ. ಮಹಾಪ್ರಭೂ – ಗೂಢಚಾರರಾಗಿ ಬಂದಿದ್ದಾರೆ."

"ಬೇಕಾದುದನ್ನು ಅವರು ತಿಳಿದುಕೊಂಡು ಹೋಗಲಿ – ನಮಗಾಗುವ ನಷ್ಟವೇನು ?"

"ಈ ವಿಷಯದಲ್ಲಿ ಮಹಾಪ್ರಭುಗಳ ಅಭಿಪ್ರಾಯ ಒಪ್ಪಲು ನಾನು ಅಸಮರ್ಥನಾಗಿದ್ದೇನೆ."

ಎಂದು ಮಲ್ಲಿನಾಥರು ಅಸಂತುಷ್ಟಿ ವ್ಯಕ್ತ ಮಾಡಿದರು.

ಈ ಮಾತು ಎಲ್ಲಿ ದೊರೆಗಳಿಗೂ, ದಣ್ಣಾಯಕರಿಗೂ ವೈಮನಸ್ಯಕ್ಕೆ ಕಾರಣವಾಗುವುದೋ ಎಂದು ಹೆದರಿದ ಮಾರಪ್ಪನಾಯಕರು

"ಯಾರಿಗೂ ಅಸಮಾಧಾನವಾಗದಂತೆ ಈ ವಿಷಯ ನಾನು ನೋಡಿಕೊಳ್ಳಬಲ್ಲೆ ಮಹಾಪ್ರಭೂ." ಎಂದರು.

"ಹೇಗೆ ಮಾರಪ್ಪನಾಯಕರೇ ?"

"ವಾಲಿ ಮಹಮುದರಿಗೆ ವ್ಯವಧಾನ ಸಿಕ್ಕದಂತೆ ನಾನು ಔತಣ, ಸಮಾರಂಭ, ಸಂಗೀತ, ನೃತ್ಯ, ಮೃಗಯಾವಿಹಾರಗಳಲ್ಲಿ ತೊಡಗಿಸುತ್ತೇನೆ. ನಮ್ಮ ಆತಿಥ್ಯದ ಅಜೀರ್ಣಸಹಿಸಲಾರದೆ ಅವರು ಊರಿಗೆ ಪ್ರಯಾಣ ಬೆಳಸುವಂತೆ ಮಾಡುತ್ತೇನೆ."

ಮಾರಪ್ಪನಾಯಕರ ಜಾಣ್ಮೆಗೆಲ್ಲರೂ ತಲೆದೂಗಿ ಮೆಚ್ಚುಗೆ ವ್ಯಕ್ತ ಮಾಡಿದರು. ಪ್ರಸಂಗ ಸುಖಪರ್ಯವಸಾನಯಾದುದಕ್ಕೆ ಮಹಾರಾಜರು ಸಂತೋಷಿಸಿದರು.

ಆಶ್ವಯುಜ ಮಾಸದ ಒಂದು ಸಂಜೆ.

ಮಧ್ಯಾಹ್ನ ತುಸು ಮಳೆಯಾಗಿ ವಾತಾವರಣ ಹಿತಕರವಾಗಿದೆ.

ಗಿರಿವನದಲ್ಲಿ ಪಶ್ಚಿಮಾದ್ರಿಯ ಎದುರಿನ ಶಿಲಾಪೀಠದ ಮೇಲೆ ಪದ್ಮಾಸನಾಸೀನರಾಗಿ ಶ್ರೀಗುರುಗಳು ಕುಳಿತು, ಅಸ್ತಮಿಸುತ್ತಿದ್ದ ಭಾಸ್ಕರನ ಅಮರ ಸೌಂದರ್ಯವನ್ನು ಈಕ್ಷಿಸುತ್ತಿದ್ದಾರೆ.

ಋಷಿ ರಸಋಷಿಯಾಗಿದ್ದಾನೆ.

ಕೆನ್ನೀಲ ಮಿಶ್ರಿತ ಆಕಾಶದಿಂದಿಳಿಯುತ್ತಿದ್ದ ಹೊನ್ನು ಹೊಳಪನ್ನು ನೋಡುತ್ತ ನೋಡುತ್ತ ಸನ್ಯಾಸಿ ಸಮಾಧಿ ಸ್ಥಿತಿ ಮುಟ್ಟಿದ್ದಾನೆ. ಆತನ ಹೃದಯ ತುಂಬಿದ್ದ ಆನಂದ ದೇಹವನ್ನೇ ಛೇದಿಸಿಕೊಂಡು, ಹೊರವಲಯವನ್ನು ತನ್ನ ಪ್ರಭೆಯಿಂದ ಬೆಳಗಿಸಿದೆ.

ಶ್ರೀಗುರುಗಳು ಥಟ್ಟನೆ ಕಣ್ಣು ಬಿಟ್ಟು ನೋಡಿದರು.

ಎದುರಿಗೆ – ನೆಲದ ಮೇಲೆ ಮಹಾರಾಜ್ಞಿ ಗೌರಾಂಬಿಕೆ ಕೈ ಜೋಡಿಸಿ ಕುಳಿತಿದ್ದಾಳೆ.

ಶ್ರೀಗುರುಗಳು ಆಸನ ಬಿಟ್ಟೆದ್ದು ನಿಂತು

"ಯಾವಾಗ ಬಂದಿರಿ ತಾಯೀ" ಎಂದರು.

ಗೌರಾಂಬಿಕೆ ಶ್ರೀಗುರುಗಳ ಚರಣಗಳಿಗೆ ನಮಿಸಿ

"ಶ್ರೀಗುರುದೇವರು ಪೀಠಾಸೀನರಾಗಬೇಕು."

ಎಂದು ಪ್ರಾರ್ಥಿಸಿದಳು.

ಶ್ರೀಗುರುಗಳು ಸ್ವಸ್ಥಾನದಲ್ಲಿ ಕೂಡಲು

"ಸ್ವಾಮಿ, ನಾನು ತಮ್ಮ ಮಗಳು, ತಮ್ಮ ಕರುಣೆಯ ಕಂದ - ನನಗೆ ತಾವು ಗೌರವ ಸಲ್ಲಿಸಬೇಕೇ ?"

"ಅಮ್ಮಾಜಿ, ನೀನು ನನ್ನ ಮಗಳು ದಿಟ. ಆದರೆ ನೀನು ಈ ಮಹಾ ಸಾಮ್ರಾಜ್ಯದ ಪಟ್ಟಮಹಿಷಿಯಲ್ಲವೇ ? ಅಮ್ಮಾಜಿ ನನ್ನ ಮಗಳು – ಆದರೆ ಸಾಮ್ರಾಜ್ಞಿಗೆ ನಾನು ಮಗನಲ್ಲವೇ ? ತಾಯೀ, ನೀನು ಪ್ರತ್ಯಕ್ಷ ಭುವನೇಶ್ವರಿ."

"ಗುರುಸ್ವಾಮಿ, ತಮ್ಮ ತಪಃಪ್ರಭಾವದಿಂದ ಕಗ್ಗಲ್ಲು ಮಂದಾರ ಪುಷ್ಪವಾಗುವಾಗ ನಾನೇಕೆ ಭುವನೇಶ್ವರಿಯಾಗಬಾರದು."

"ನೀನು ಬಂದು ಬಹಳ ಹೊತ್ತಾಯಿತೇ ಅಮ್ಮಾಜಿ.

"ಇಲ್ಲ – ಸ್ವಲ್ಪ ಹೊತ್ತಾಯಿತು. ಆಶ್ರಮಕ್ಕೆ ಹೋದೆ – ತಾವು ಗಿರಿವನದತ್ತ ಹೋದುದಾಗಿ ಶ್ರೀಕಂಠ ತಿಳಿಸಿದ – ಇತ್ತ ಬಂದೆ"

"ನೀನೇಕೆ ಇಷ್ಟು ತೊಂದರೆ ತೆಗೆದುಕೊಂಡೆ ಅಮ್ಮಾಜಿ. ಹೇಳಿ ಕಳಿಸಿದ್ದರೆ ನಾನೇ ಅರಮನೆಗೆ ಬರುತ್ತಿದ್ದೆನಲ್ಲ."

"ನಾನು ರಹಸ್ಯ ಮಾತನಾಡಬೇಕಾಗಿತ್ತು."

"ಹೇಳು."

"ಮಂತ್ರಿಮಂಡಲದಲ್ಲಿ ನಡೆದುದು ತಮ್ಮ ಚಿತ್ತಕ್ಕೆ ವೇದ್ಯವಾಗಿರಬೇಕು. ಮಾರಪ್ಪ, ಮುದ್ದಪ್ಪನಾಯಕರೂ, ದಣ್ಣಾಯಕ ಮಲ್ಲಿನಾಥರೂ ಕಲ್ಬುರ್ಗಿಯ ಮೇಲೆ ಕದನವಾರಂಭಿಸಲು ಆತುರರಾಗಿದ್ದಾರೆ – ಪ್ರಭುಗಳೇ ಅವರನ್ನು ತಡೆಯುತ್ತಿದ್ದಾರೆ."

"ಪ್ರಭುಗಳ ದೃಷ್ಟಿ ಧರ್ಮಸಮ್ಮತವಾಗಿದೆ. ಆದರೆ ಅವರೂ ಯುದ್ಧವನ್ನು ಬಹಳ ತಡೆಯಲಾಗುವುದಿಲ್ಲ ಅಮ್ಮಾಜಿ. ಬಹಮನಿಯ ಅರಸರು ಕೈಗಳಲ್ಲಿ ಕುರಾನ್, ಕೃಪಾಣಗಳನ್ನು ಹಿಡಿದು ಹೊರಟಿದ್ದಾರೆ."

"ಯುದ್ಧ ಅನಿವಾರ್ಯವೆನ್ನುವಿರಾ ?"

"ಅಲಗಿನ ಮನೆಯಿಂದ ಜನತೆಗೆ ಧರ್ಮ ಕಲಿಸುವ ಪ್ರವೃತ್ತಿಯನ್ನು ಇಸ್ಲಾಂ ತೊರೆಯುವವರೆಗೆ ಭಾರತವರ್ಷದಲ್ಲಿ ಮಾತ್ರವೇ ಅಲ್ಲ – ವಿಶ್ವದಲ್ಲೇ ಯುದ್ಧ ಅನಿವಾರ್ಯ."

" ಯುದ್ಧಕ್ಕೆ ಎಲ್ಲರೂ ಹೋಗಬೇಕಾದ ಅಗತ್ಯ ಬೀಳುತ್ತದೆಯೇ ಗುರುದೇವಾ ?"

" ನಿನ್ನ ಪ್ರಶ್ನೆಯೇ ವಿಚಿತ್ರವಾಗಿದೆಯಲ್ಲ ಅಮ್ಮಾಜಿ. ಪ್ರಭುಗಳ ಮನಸ್ಸನ್ನು ನೀನು ಬಲ್ಲೆ – ವಿನಾಕಾರಣ ಒಬ್ಬ ಸೈನಿಕನ ಪ್ರಾಣವನ್ನು ಅವರು ಪಣವಾಗಿಡಲಾರರು."

"..................."

" ಯಾವ ಚಿಂತೆ ನಿನ್ನ ಮನಸ್ಸನ್ನು ಕೊರೆಯುತ್ತಿದೆ ತಾಯಿ."

" ಯುವರಾಜ ಕುಮಾರ ಹರಹರಿನೂ ಯುದ್ಧಕ್ಕೆ ಹೋಗಬೇಕಂತೆ !"

" ಹಾಗೆ ಹೇಳಿದವರು !"

" ಮುದ್ದಪ್ಪನಾಯಕರು."

" ಮುದ್ದಪ್ಪನಾಯಕರೊಬ್ಬರೇ ಅಲ್ಲ ಅಮ್ಮಾಜಿ – ನಾನೂ ಹೇಳಿದೆ."

" ನೀವು ಗುರುದೇವಾ ! ! — ಯುವರಾಜ ಕುಮಾರ ಇನ್ನೂ ಚಿಕ್ಕವನು. ಯುದ್ಧರಂಗದಲ್ಲೇನಾದರೂ ಅಪಘಾತ........"

ಶ್ರೀಗುರುಗಳ ಮುಖ ಗಭೀರವಾಯಿತು. ಆ ಸೌಮ್ಯವದನ ಕಾಠಿಣ್ಯಕ್ಕೆ ಅವಕಾಶಕೊಟ್ಟಿತ್ತು. ಶ್ರೀಗಳವರ ಧ್ವನಿಯೂ ಭಾರಗೊಂಡಿತ್ತು.

" ಅಮ್ಮಾಜಿ, ಕಲ್ಬುರ್ಗಿಯ ಮುತ್ತಿಗೆಗೆ ಇಲ್ಲಿಂದ ಸುಮಾರು ಮೂವತ್ತು ಸಾವಿರ ಸೈನಿಕರು, ಹತ್ತು ಸಾವಿರ ಅಶ್ವಬಲ, ಐದು ಸಾವಿರ ಗಜಬಲ ಹೊರಡಬೇಕಾಗುತ್ತದೆ. ಈ ಸೈನಿಕರ, ಅಶ್ವಾರೋಹಿಗಳ, ಗಜಾರೂಢರ ತಾಯಂದಿರೂ ನೀನು ಹೇಳುವುದನ್ನೇ ಹೇಳಿದರೆ ರಾಜ್ಯದ ಗತಿಯೇನು ತಾಯಿ.

ಗೌರಾಂಬಿಕೆ, ನೀನು ಯುವರಾಜ ಕುಮಾರರೊಬ್ಬರ ತಾಯಿಯಲ್ಲ, ಇಡಿಯ ರಾಷ್ಟ್ರದ ತಾಯಿಯಾಗಿದ್ದೀ. ಈ ಮಗ ನಿನಗೆ ಹೇಗೋ ಆ ಮಕ್ಕಳೂ ಹಾಗೆಯೇ! ಆ ಮಕ್ಕಳ ಸುಖವೇ ಈ ಮಗನ ಸುಖವಾಗಬೇಕು – ಆ ಮಕ್ಕಳ ಕಷ್ಟವೇ ಈ ಮಗನ ಕಷ್ಟವಾಗಬೇಕು.

ಅಮ್ಮಾಜಿ ನೀನು ಅಮೃತಪುತ್ರಿ, ವಿರಾಟಗರ್ಭೆ, ವಿಶ್ವಮಾತೆ — ಒಬ್ಬ ಮಗನಿಗಾಗಿ ಇಷ್ಟು ಚಿಂತಿಸುವೆಯಾಮ್ಮ. ವಿಜಯನಗರ ನಿನ್ನ ಹಿರಿಯ ಪುತ್ರ – ಈ ಮಗನಿಗಾಗಿ ನೀನೆಲ್ಲವನ್ನೂ ಬಲಿದಾನವಾಗರ್ಪಿಸಲು ಸಿದ್ಧವಾಗಬೇಕು.

ಸಂಸಾರಸಂಗ ಪರಿತ್ಯಾಗಮಾಡಿದ ಸನ್ಯಾಸಿಗೆ ತಾಯಿಯ ಹೃದಯ ವೇದನೆ ಹೇಗೆ ಅರ್ಥವಾಗಬೇಕೆಂದು ಭಾವಿಸಬೇಡ ಅಮ್ಮಾಜಿ. ಇಂದಿನ

ತಾಯಂದಿರು, ನಾಳಿನ ತಾಯಂದಿರು, ಅವರ ಮಕ್ಕಳು ನಿತ್ಯ ಸುಖಿಗಳಾಗಿರಲೆಂದೇ ಈ ಸನ್ಯಾಸಿ ಕಠೋರಚಿತ್ತನಾಗಿದ್ದಾನೆ."

ಗೌರಾಂಬಿಕೆ ಗಡಗಡನೆ ನಡಗುತ್ತ ಎದ್ದು ನಿಂತಳು.

ಶ್ರೀಗಳವರ ಮುಖ ನೋಡಲು ಅವಳಿಗೆ ಶಕ್ತಿ ಸಾಲದಾಯಿತು.

ಅವತನಮುಖಿಯಾಗಿ ನಿಂತ ಗೌರಾಂಬಿಕೆ

"ಗುರುದೇವಾ, ಅಜ್ಞಳ ಅಪರಾಧ ಕ್ಷಮಿಸಿ ಕಾಪಾಡಿ. ಯುವರಾಜ ಕುಮಾರರನ್ನು ಸಂತೋಷವಾಗಿ ಯುದ್ಧರಂಗಕ್ಕೆ ಕಳಿಸಿಕೊಡುತ್ತೇನೆ—ತಾವು ಅವನನ್ನು ಮನಃಪೂರ್ವಕವಾಗಿ ಹರಸಬೇಕು."

"ಜಯ ಭುವನೇಶ್ವರಿ – ಜಯ್ ಲೋಕಮಾತೆ."

ಎಂಬ ದಿವ್ಯಮಂತ್ರ ಶ್ರೀಗುರುಗಳ ಹೃದಯಗಹ್ವರದಿಂದ ಮೊಳಗಿತು.

## ೧೬

ವಾಲಿ ಮಹಮದರು ರಾಜಧಾನಿಗೆ ಹಿಂದಿರುಗುವುದಕ್ಕೆ ಸುಲ್ತಾನರು ಕಾಯಲಿಲ್ಲ.

ಓರುಗಲ್ಲಿನ ವಿನಾಯಕದೇವರಿಗೆ ಪೂರ್ವಸೂಚನೆ ಕೊಡದೆ, ಯುದ್ಧ ಘೋಷಣೆಮಾಡದೆ ಸುಲ್ತಾನರ ಸೈನ್ಯ ಓರುಗಲ್ಲನ್ನು ಮುತ್ತಿಗೆ ಹಾಕಿತು.

ಮಧ್ಯರಾತ್ರಿ, ಸುಖವಾಗಿ ಮಲಗಿ ನಿದ್ರಿಸುತ್ತಿದ್ದ ಓರುಗಲ್ಲನ್ನು ಸುಲ್ತಾನರ ಸೈನಿಕರ ವೀರಘೋಷ 'ಅಲ್ಲಾಹೋ ಅಕ್ಬರ್' ಎಚ್ಚರಗೊಳಿಸಿತು.

ರಾತ್ರಿಯುಡುಪಿನಲ್ಲಿ ಮಲಗಿದ್ದ ವಿನಾಯಕದೇವರು ಬಾವುಟದ ಬತೇರಿ ಹತ್ತಿ ನಿಂತು ನೋಡಿದರು. ಸಮುದ್ರದ ಅಲೆಗಳಂತೆ ಪಸರಿಸಿದ್ದ ಸುಲ್ತಾನರ ಸೈನ್ಯ ಕಂಡು ಅವರ ಜಂಘಾಬಲವೇ ಉಡುಗಿಹೋಯಿತು. ಆತ್ಮರಕ್ಷಣೆಯ ಪ್ರಯತ್ನ ನಿಸ್ಸಾರ್ಥಕವಾಗಿ, ಸಹಸ್ರಾರು ನಿರಪರಾಧಿ ಸ್ತ್ರೀ ಪುರುಷರ ಹತ್ಯಾಕಾಂಡದಲ್ಲಿ ಕೊನೆಗಾಣುವುದೆಂದು ಯೋಚಿಸಿದ ವಿನಾಯಕ

ದೇವರು ಪಂಜಿನ ಬೆಳಕಿನಲ್ಲಿ ಬಿಳಿಯ ಬಾವುಟ ತೋರಿಸಿ, ಸುಲ್ತಾನರ ಸೈನ್ಯಾಧಿಪತಿ ವಾಹಿದ್ ಖಾನನಿಗೆ ಶರಣಾಗತರಾದರು.

ಅಸ್ವತಂತ್ರರಾಗಿದ್ದ ವಿನಾಯಕದೇವರು ವಾಹಿದ್‌ಖಾನ್, ಅವನ ಸೈನ್ಯಿಕರು ನಡೆಸಿದ ಲೂಟಿಯನ್ನೂ ನೋಡುತ್ತ ಹತಾಶರಾಗಿ ಕುಳಿತರು.

ಕುದುರೆಗಳು, ಆನೆಗಳು, ರಥಗಳು ಹೊರುವಷ್ಟು ಅಮೂಲ್ಯವಸ್ತುಗಳನ್ನೂ ಅನರ್ಘ್ಯ ರತ್ನಗಳನ್ನೂ ಸಂಗ್ರಹಿಸಿಕೊಂಡು ವಾಹಿದ್‌ಖಾ, ವಿನಾಯಕ ದೇವರ ಶರಣಾಗತಿಯ ಓಲೆ ಬರೆಸಿಕೊಂಡು ವಿಜಯೋತ್ಸಾಹದಿಂದ ರಾಜಧಾನಿಗೆ ಪ್ರಯಾಣ ಬೆಳಸಿದ.

ನಡೆದಿದ್ದ ದುರ್ಘಟನೆಯಿಂದಾಗಿದ್ದ ಅಪಮಾನ, ಸಂಪತ್ತಿನ ಸೂರೆ ಓರುಗಲ್ಲಿನ ಪ್ರಜಾವರ್ಗಕ್ಕೆ ಅಸಹನೀಯವಾಯಿತು. ದರೋಡೆಯ ರುಚಿ ಕಂಡ ಕಲ್ಬುರ್ಗಿಯ ಸುಲ್ತಾನರು ಮತ್ತೆ ಮತ್ತೆ ಓರುಗಲ್ಲಿಗೆ ದರ್ಶನ ಕೊಡುವುದರಲ್ಲಿ ಸಂದೇಹವಿಲ್ಲವೆಂದು ಜನ ಬಗೆದರು. ದುರ್ಬಲರಾಗಿದ್ದ ದೊರೆ ವಿನಾಯಕದೇವರ ಮರೆಹೊಗುವುದರಲ್ಲಿ ಪ್ರಯೋಜನವಿಲ್ಲವೆಂದು ಭಾವಿಸಿದ ಜನ, ಅರಮನೆಯ ಸೇವೆಯಿಂದ ನಿವೃತ್ತರಾಗಿ ವಿಶ್ರಾಮಧಾಮ ಸೇರಿದ್ದ ಸಂಗ್ರಾಮಶೂರ ಭೀಮದೇವನ ಬಳಿಗೆ ಹೋಗಿ ಮೊರೆಯಿಟ್ಟರು.

ವಯೋಧರ್ಮದಿಂದ ಝರ್ಝರಿತನಾಗಿದ್ದರೂ ಕ್ಷಾತ್ರತೇಜದಿಂದಲೂ, ದೇಶಾಭಿಮಾನದಿಂದಲೂ ವಿರಾಜಿಸುತ್ತಿದ್ದ ಭೀಮದೇವ ಜನರ ಬಿನ್ನಹ ಕೇಳಿ,

"ರಾಜ್ಯ ದೊರೆಯದೆಂದು ಭಾವಿಸಿ ನೀವು ಸುಮ್ಮನೆ ಕುಳಿತಿರಿ. ರಾಜ್ಯ ರಕ್ಷಣೆ ದೊರೆಯ ಕರ್ತವ್ಯವೆಂದು ನೀವು ಆಲಸಿಗರಾದಿರಿ. ತಪ್ಪು ನಿಮ್ಮದೇ ಆಗಿದೆ. ಈಗ ದೊರೆಯನ್ನು ಆಕ್ಷೇಪಿಸಿ ಏನು ಪ್ರಯೋಜನ?"

"ನಮ್ಮ ಗತಿಯೇನು ತಾತಾ?"

"ಎಂದು ನೀವು ಓರುಗಲ್ಲನ್ನು ಮಹಮುದ್‌ಷಹಾರ ಪ್ರತಿನಿಧಿಗೆ, ಮೈಕೈ ನೋಯಿಸಿಕೊಳ್ಳದೆ ಒಪ್ಪಿಸಿಬಿಟ್ಟರೊ ಅಂದೇ ನಿಮ್ಮ ಗತಿ ಇತ್ಯರ್ಥವಾಯಿತು. ರಾಜ್ಯವನ್ನಂತೂ ಮಹಮುದ್‌ಷಹರಿಗೆ ಒಪ್ಪಿಸಿದ್ದೀರಿ – ಹಾಗೇ ಇಸ್ಲಾಂ ದೀಕ್ಷೆ ತೆಗೆದುಕೊಂಡು ಸುಖವಾಗಿ ಬದುಕಿ."

ವೃದ್ಧಕೇಸರಿಯ ನುಡಿ ಜನಗಳ ಹೃದಯಗಳಲ್ಲಿ ಈಟಿಗಳಂತೆ ನಾಟಿತು.

ಜನಗಳ ಮಧ್ಯೆ ಕುಳಿತಿದ್ದ ತರುಣ ಕುಲವಂತಸಿಂಹ, ದಾರಿಬಿಡಿಸಿಕೊಂಡು ಭೀಮದೇವನ ಬಳಿಗೆ ಬಂದು

“ಹಿರಿಯರ ಅಪರಾಧಕ್ಕೆ ನಾವು ಶಿಕ್ಷೆ ಅನುಭವಿಸುವುದು ತರವೇ ತಾತಾ” ಎಂದು ಕೇಳಿದ.

ಪೊದರುಗಟ್ಟಿದ್ದ ಹುಬ್ಬುಗಳನ್ನು ಮೇಲಕ್ಕೆತ್ತಿ ಭೀಮದೇವ ಕುಲವಂತನನ್ನು ದಿಟ್ಟಿಸಿನೋಡುತ್ತ

“ಓರುಗಲ್ಲಿನ ಭಾಗ್ಯರವಿ ಅಸ್ತಮಿಸಿದ್ದಾನೆ ಕುಲವಂತ್ – ಜೀವನ ಯಾತ್ರೆ ಮುಗಿಸಿರುವ ನಾನು, ಯಾತ್ರೆ ಆರಂಭಿಸದಿರುವ ನೀನು – ನಾವಿಬ್ಬರೂ ಏನು ಮಾಡಲು ಸಾಧ್ಯ ?”

“ಮಾನ ನೀಗಿಕೊಂಡು ಮುಸ್ಲಿಮರ ಪದತಲದಲ್ಲಿ ಬೀಳುವುದಕ್ಕಿಂತ ಸಾಯುವುದೇ ಲೇಸಲ್ಲವೇ ?”

“ನೀನು ಸಾಯಲು ಸಿದ್ಧನಾಗಿರುವೆಯಾ ಕುಲವಂತ್ ?”

“ನನ್ನ ಕರವಾಳಕ್ಕೆ ಸುಲ್ತಾನ್ ಮಹಮುದರ ರಕ್ತಸೇಚನೆ ಮಾಡಿಸಿ ಸಾಯಲು ಸಿದ್ಧವಾಗಿದ್ದೇನೆ.”

“ನೀನೊಬ್ಬ ಸತ್ತರೇನಾಯಿತು – ಓರುಗಲ್ಲು ರಕ್ಷಿಸಲ್ಪಡುವುದೇ – ಸುಲ್ತಾನರ ಸುಶಿಕ್ಷಿತ ಸೈನ್ಯದ ಮುಂದೆ ನೀನೊಬ್ಬ ನಿಲ್ಲಬಲ್ಲೆಯಾ ?”

ತನ್ನ ಮುಂದಿದ್ದ ಜನಸ್ತೋಮವನ್ನು ತೋರಿಸುತ್ತ ಕುಲವಂತ

“ನಾನೊಬ್ಬನೇ ಅಲ್ಲ ತಾತ – ಸಮಸ್ತ ಪ್ರಜರೂ ಓರುಗಲ್ಲಿನ ಭವಿಷ್ಯ ನಿರ್ಧರಿಸುವ ಕೊನೆಯ ಸಮರದಲ್ಲಿ ಭಾಗಿಗಳಾಗಿ ಆತ್ಮಾರ್ಪಣ ಮಾಡಲು ಸಿದ್ಧರಾಗಿದ್ದಾರೆ.”

ಭೀಮದೇವ ಗಹಗಹಿಸಿ ನಗುತ್ತ

“ಈ ಹೆಂಬೇಡಿಗಳನ್ನು – ಆತ್ಮರಕ್ಷಣೆ ಮಾಡಿಕೊಳ್ಳಲು ಅಸಮರ್ಥರಾದ ಕ್ಲೀಬರನ್ನು ನಂಬಿಕೊಂಡು ಯುದ್ಧರಂಗಕ್ಕಿಳಿಯುವುದೇ ? ಹೋಗು ಕುಲವಂತ – ನೀವು ಯಾರೂ ನನಗೆ ಮುಖ ತೋರಿಸಬೇಡಿ. ಪೌರುಷ ಹೀನರಾದ ಅಧಮರಲ್ಲಿ ಜನ್ಮ ತಾಳಿದೆನಲ್ಲಾ ಎಂದು ನನಗೆ ಮಹದ್ವ್ಯಸನವಾಗಿದೆ.”

ಎಂದೆದ್ದು ಒಳಗೆ ಹೋಗಲು ಯತ್ನಿಸಲು ಕುಲವಂತ ಅವನನ್ನು ತಡೆಗಟ್ಟಿ, ಭೀಮದೇವರ ಮನೆಯ ಪೌಳಿ ಗೋಡೆಯ ಮೇಲೇರಿ ನಿಂತು,

“ಕೇಳಿದಿರಾ ತಾತಾ ಭೀಮದೇವರ ಮರ್ಮಭೇದಕ ನುಡಿಗಳನ್ನು ! ನಾವು ಹೆಂಬೇಡಿಗಳಲ್ಲ – ಕ್ಲೀಬರಲ್ಲ ಎಂದು ತಾತಂದಿರಿಗೆ ಸಾಕ್ಷ್ಯ ಒದಗಿಸ

ಬೇಕಾಗಿದೆ. ನೀವು ನನ್ನ ಜತೆಯಲ್ಲಿ ಬನ್ನಿ, ಬಿಡಿ; ತಾತಾ ಭೀಮದೇವರು ನನ್ನನ್ನು ಹರಸಲಿ, ಬಿಡಲಿ, ನಾನಂತೂ ಕಲ್ಬುರ್ಗಿಯ ದೈತ್ಯನನ್ನು ಸಂಹರಿಸಿದಲ್ಲದೆ ತೃಪ್ತನಾಗುವುದಿಲ್ಲ. ಪಿಶಾಚಿಯಂತೆ ಅಲೆದು, ಏಕಾಂಗಿಯಾಗಿ ಸುಲ್ತಾನನ ಮೇಲೆ ಬಿದ್ದು ಅವನ ಎದೆಬಗೆದು, ರಕ್ತ ಹೀರುತ್ತೇನೆ.”

ಕುಲವಂತನ ವೀರಸಂದೇಶ ಕೇಳುತ್ತಿದ್ದ ಭೀಮದೇವನ ಧಮನಿಗಳಲ್ಲಿ ಬಿಸಿರಕ್ತ ಪ್ರವಹಿಸಿತು. ಉದ್ವೇಗಗೊಂಡು ಬಂದವನೇ ಕುಲವಂತನನ್ನಪ್ಪಿ.

“ನಿನ್ನೊಂದಿಗೆ ನಾನೂ ಬರುತ್ತೇನೆ ನಡೆ ತಮ್ಮ” ಎಂದ.

“ನಾವೂ ಸಿದ್ಧವಾಗಿದ್ದೇವೆ – ಸಿದ್ಧವಾಗಿದ್ದೇವೆ”

ಎಂದು ಜನ ಘೋಷಿಸಿದರು.

ಭೀಮದೇವರ ಮನೆ ರಣಮಂಟಪವಾಯಿತು.

ಭೀಮದೇವರು, ಕುಲವಂತನ ನಾಯಕತ್ವದಲ್ಲಿ ಓರುಗಲ್ಲಿನ ಜನ ಬಹಮನಿ ಸುಲ್ತಾನನ್ನೆದುರಿಸಲು ಸಿದ್ಧರಾದರು.

## ೧೭

‘ರಾಜ ಮಹಲಿ’ನ ವಿಶಾಲ ಸಭಾಂಗಣದಲ್ಲಿ ಹರಡಿದ್ದ ಅಮೌಲ್ಯ ವಸ್ತ್ರಾಭರಣಗಳನ್ನು ಪರಾಮರ್ಶಿಸುತ್ತ ಸುಲ್ತಾನ್ ಮಹಮದರು, ಕೆಂಪೇರಿದ್ದ ತಮ್ಮ ಕಣ್ಣಾಲಿಗಳನ್ನು ವಾಹಿದ್ ಖಾನರತ್ತ ತಿರುಗಿಸಿ

“ನಾವು ನಿಮ್ಮನ್ನು ಸೈನ್ಯಸಮೇತ ಓರುಗಲ್ಲಿಗೆ ಕಳುಹಿಸಿದ್ದು ಲೂಟಿ ಮಾಡಿಕೊಂಡು ಬರುವುದಕ್ಕಲ್ಲ ವಾಹಿದ್ ಖಾನ್.”

ಸುಲ್ತಾನರಿಂದ ಮೆಚ್ಚುಗೆ, ಖಿಲ್ಲತ್ತುಗಳನ್ನು ನಿರೀಕ್ಷಿಸುತ್ತಿದ್ದ ವಾಹಿದ್ ಖಾನ್ ಅಧೀರನಾಗಿ,

“ಶ್ರೀ ವಿನಾಯಕದೇವರು ಶರಣಾಗತರಾದ ಮೇಲೆ ಯುದ್ಧ ಮಾಡುವ ಪ್ರಸಂಗವೇ ಬೀಳಲಿಲ್ಲ ಜಹಾಪನಾ.”

“ವಿನಾಯಕದೇವರನ್ನು ಸೆರೆ ಹಿಡಿದು ತರಬೇಕಾಗಿತ್ತು.”

ವಾಹಿದ್ ಖಾನ್ ಕಕ್ಕಾಬಿಕ್ಕಿಯಾಗಿ

" ನನಗದು ಹೊಳೆಯಲಿಲ್ಲ ಹುಜೂರ್."

" ನಿಮ್ಮ ತಲೆಯಲ್ಲಿ ಮಣ್ಣು ತುಂಬಿದೆ–ಉಗುರಿನ ಮೊನೆಯಲ್ಲಿ ಆಗುವ ಕೆಲಸಕ್ಕೆ ಕೊಡಲಿ ಎತ್ತುಕೊಳ್ಳುವಂತೆ ಮಾಡಿದಿರಿ. ವಿನಾಯಕ ದೇವರು ವಿಜಯದಗರದ ನೆರವು ಪಡೆಯುವ ಮುನ್ನ ಅವರ ಕಥೆ ಮುಗಿಸಬೇಕೆಂದಿದ್ದೆವು – ಈಗ ನೀವೇ ಅವರಿಗೆ ಕಾಲಾವಕಾಶ ಕೊಟ್ಟಿರಿ."

" ಈಗಲೂ ನಾನು ಓರುಗಲ್ಲಿಗೆ ಹೋಗುವುದಕ್ಕೆ ಸಿದ್ಧವಾಗಿದ್ದೇನೆ ಹುಜೂರ್."

" ಅಗತ್ಯವಿಲ್ಲ. ಈ ಬಾರಿ ಸೈನ್ಯಗಳನ್ನು ನಾವೇ ನಡೆಸುತ್ತೇವೆ"

ಎಂದು ಹೇಳಿದರು.

ವಾಲಿ ಮುಹಮುದ್‌ರು ಎರಡು ದಿನಗಳಲ್ಲಿ ವಿಜಯನಗರದಿಂದ ಹಿಂದಿರುಗಿದರು. ಸುಲ್ತಾನರು ಅತ್ಯಾತುರದಿಂದ ವಿಜಯನಗರದ ಸುದ್ದಿ ಕೇಳಿದರು.

ವಾಲಿ ಮುಹಮುದ್ ಅನುಮಾನಿಸುತ್ತ

" ನಿಜಸ್ಥಿತಿ ಹೇಳಿದರೆ ಜಹಾಪನಾ ಅವರಿಗೆ ಅಸಮಾಧಾನವಾಗುತ್ತದೋ ಏನೋ ?"

" ಸುಳ್ಳು ಸುದ್ದಿ ಹೇಳುವುದಕ್ಕೆ ದರ್ಬಾರಿನ ತುಂಬಾ ಜನರಿದ್ದಾರೆ ವಾಲಿ – ನಮಗೆ ಬೇಕಾದುದೇ ನಿಜಸ್ಥಿತಿ."

" ವಿಜಯನಗರದಂಥ ಸಂಪತ್ಸಮೃದ್ಧವಾದ ರಾಜ್ಯ ನಾನು ನೋಡಿಯೇ ಇಲ್ಲ ಹುಜೂರ್. ಗುಡ್ಡಗಾಡಿನಂತಿರುವ ಆ ಪ್ರದೇಶದಲ್ಲಿ ಜನ ವಾಸಿಸಲು ಸಾಧ್ಯವೇ – ಕೃಷಿ ಮಾಡಲು ಸಾಧ್ಯವೇ ಎಂದು ವಿಚಾರ ಮಾಡಿದೆ. ದೊರೆಗಳ ತಮ್ಮಂದಿರಾದ ಶ್ರೀಮಾರಪ್ಪನಾಯಕರು ನನ್ನನ್ನು ಕರೆದೊಯ್ದು ರಾಜಧಾನಿಯಲ್ಲಿ ನಡೆಯುತ್ತಿದ್ದ ಕೆಲಸಗಳನ್ನೆಲ್ಲಾ ತೋರಿಸಿದರು. ಯುದ್ಧಚಿಂತನೆ, ಯುದ್ಧಸಿದ್ಧತೆಯೇ ನನಗೆ ಕಂಡು ಬರಲಿಲ್ಲ. ಜನ ನಿರಾಪದರಾಗಿ ನಿತ್ಯಗೆಲಸಗಳಲ್ಲಿ ಉದ್ಯುಕ್ತರಾಗಿದ್ದಾರೆ. ವಿಶಾಲವಾದ ರಾಜಮಾರ್ಗಗಳು, ಸುಂದರವಾದ ಉಪವನಗಳು, ಭವ್ಯವಾದ ಗುಡಿ ಗೋಪುರಗಳು ನಿರ್ಮಾಣವಾಗುತ್ತಿವೆ. ನೀರಿನ ಸೌಕರ್ಯಕ್ಕಾಗಿ ತುಂಗಭದ್ರಾ ನದಿಯಿಂದ ದೊಡ್ಡ ಕಾಲುವೆ ತೋಡಿಸುತ್ತಿದ್ದಾರೆ. ಜನ ಸ್ನೇಹಪರರೂ, ಸರಳರೂ ಆಗಿದ್ದಾರೆ. ಮರೆ, ಮೋಸ, ಕೊಂಕುಗಳನ್ನರಿಯರು. ನಾವು ಹೋದಲ್ಲೆಲ್ಲಾ ಜನ ಗುಂಪು ಕಟ್ಟಿಕೊಂಡು ನಿಂತು ಜಯ ಜಯಕಾರ

ಮಾಡುತ್ತಿದ್ದರು. – ಬೊಗಸೆಗಟ್ಟಳೆ ಗುಲಾಬಿ ಹೂಗಳನ್ನು ತಂದು ಕೊಡುತ್ತಿದ್ದರು. ನನ್ನ ಜತೆ ಬಂದಿದ್ದ ಕಲಾವಿದರು, ವಿದ್ವಾಂಸರಿಗೆ ದೊರೆಗಳು ವಿಶೇಷ ಮನ್ನಣೆ ನೀಡಿ, ಭಾರಿ ಭಾರಿ ಖಿಲ್ಲತ್ತುಗಳನ್ನೂ ರತ್ನರಂಜಿತ ತೋಡಾಗಳನ್ನು ದಯೆಪಾಲಿಸಿದ್ದಾರೆ."

ಸುಲ್ತಾನರು ಗಡ್ಡದಮೇಲೆ ಕೈಯಾಡಿಸುತ್ತಾ

" ಈ ಜನ ಮುಸ್ಲಿಮರನ್ನು ದ್ವೇಷಿಸುವುದಿಲ್ಲವೇ ವಾಲಿ ?"

" ಇಲ್ಲ ಹುಜೂರ್. ವಿಜಯನಗರದಲ್ಲಿ ಈಗಾಗಲೇ ಮೂರು ಮಸೀದಿಗಳಿವೆ – ನಾಲ್ಕನೆಯ ಮಸೀದಿಯ ನಿರ್ಮಾಣವಾಗುತ್ತಿದೆ. ಅಲ್ಲಿ ಹಿಂದು ಯಾರು, ಮುಸ್ಲಿಮ ಯಾರು ಎಂದು ಗುರುತಿಸುವುದೇ ನನಗೆ ಕಷ್ಟವಾಯಿತು. ದೊರೆಗಳ ಊಳಿಗದಲ್ಲಿ ಸಹಸ್ರಾರು ಮುಸ್ಲಿಮರಿದ್ದಾರೆ. ಸೈನ್ಯದಲ್ಲಿ ಮುಸ್ಲಿಮರು ಉಚ್ಚಸ್ಥಾನಗಳಲ್ಲಿದ್ದಾರೆ. ಎಲ್ಲರೂ ಮಾತೃಭಾಷೆ ಕನ್ನಡ ಮಾತನಾಡುತ್ತಾರೆ, ಧೋತ್ರ ಉಡುತ್ತಾರೆ. ಮುಸ್ಲಿಮ ಹೆಣ್ಣು ಮಕ್ಕಳು ಕೂಡ ಘೋಷಾ ಇಲ್ಲದೆ ನಿರ್ಭಯವಾಗಿ ರಸ್ತೆಗಳಲ್ಲಿ ಓಡಿಯಾಡುತ್ತಾರೆ."

" ಮಸೀದಿಗಳಲ್ಲಿ........"

" ಅಲ್ಲಿಯೂ ಕನ್ನಡವೇ – ಮೌಲ್ವಿಗಳ ಉಪದೇಶವೂ ಕನ್ನಡದಲ್ಲಿಯೇ ನಡೆಯುತ್ತದೆ."

" ಆಶ್ಚರ್ಯ ! ಆಶ್ಚರ್ಯ !!"

" ದೊರೆಗಳೇ ಖುದ್ದಾಗಿ ರಾಜ್ಯದ ಎಲ್ಲ ಕೆಲಸಕಾರ್ಯಗಳನ್ನೂ ಪರಾಮರ್ಶಿಸುತ್ತಾರೆ. ಜನರೊಂದಿಗೆ ಅವರು ನಿಕಟಸಂಬಂಧ ಇಟ್ಟು ಕೊಂಡಿಂದ್ದಾರೆ. ಪ್ರತಿಯೊಬ್ಬರ ಕಷ್ಟಸುಖವನ್ನೂ ತಾವೇ ವಿಚಾರಿಸುತ್ತಾರೆ. ಅವರ ಕೊರಳಲ್ಲಿರುವ ರತ್ನಮಾಲೆ, ಕೈಯಲ್ಲಿರುವ ಮುದ್ರೆಯುಂಗುರಗಳಿಂದ ಅವರನ್ನು ದೊರೆಗಳೆಂದು ನಾವು ಗುರುತಿಸಬೇಕಾಗಿದೆ. ಸಾಮಾನ್ಯ ಪ್ರಜೆಗೂ ದೊರೆಗೂ ಯಾವ ವ್ಯತ್ಯಾಸವೂ ಇಲ್ಲ. ಪ್ರತಿದಿನ ಮಧ್ಯಾಹ್ನಾನಂತರ ಮೂರು ಗಂಟೆಗೆ ದೊರೆಗಳೇ ನ್ಯಾಯ ವಿಚಾರಣೆಗೆ ಕೂಡುತ್ತಾರೆ. ಆಗ ಯಾರು ಬೇಕಾದರೂ ನೇರವಾಗಿ ದೊರಗಳಲ್ಲಿ ಹೋಗಿ ತಮ್ಮ ಅಹವಾಲು ಒಪ್ಪಿಸಬಹುದು. ದೊರೆಗಳೇ ಖುದ್ದಾಗಿ ವಿಚಾರಣೆಮಾಡಿ, ಕೂಡಲೆ ಪರಿಹಾರ ಒದಗಿಸುತ್ತಾರೆ. ಶ್ರೀ ಬುಕ್ಕರಾಯರನ್ನು ಜನ ದೊರೆ ಎಂದು ತಿಳಿದುಕೊಂಡಿರುವುದಕ್ಕಿಂತ ಹೆಚ್ಚಾಗಿ ತಂದೆ ಎಂದು ತಿಳಿದುಕೊಂಡಿದ್ದಾರೆ."

"ಆ ಭಾವನೆಯೇ ಈ ಜನರ ಶಕ್ತಿಯ ಮೂಲವೆಂದು ಕಾಣುತ್ತದೆ."

"ವಿಜಯನಗರದ ಜನಶಕ್ತಿಯ ಮೊತ್ತವೇ ಅವರ ದೊರೆ ಶ್ರೀ ಬುಕ್ಕರಾಯರು. ಈ ಶಕ್ತಿಯ ಕೇಂದ್ರವಿರುವುದು ಬೇರೆಯೆಡೆಯಲ್ಲಿ!"

"ಎಲ್ಲಿ?"

"ಪಂಪಾಪತಿಯ ದೇವಾಲಯದ ಹಿಂದಿರುವ ಗುಡಿಸಿಲಿನಲ್ಲಿ ಒಬ್ಬ ಸನ್ಯಾಸಿ ಇದ್ದಾರೆ - ವಿದ್ಯಾರಣ್ಯ ಎಂದು ಅವರ ಹೆಸರು. ಕಾವಿಯ ಒಂದು ತುಂಡು ಪಂಚೆ ಬಿಟ್ಟು ಆ ಸನ್ಯಾಸಿ ಮೈಮೇಲೆ ಏನೂ ಇಲ್ಲ – ಆದರೆ ಆತನ ಪದತಲದಲ್ಲಿ ಇಡಿಯ ಸಾಮ್ರಾಜ್ಯವಿದೆ – ದೊರೆಗಳು ಕೂಡ ಅವರ ಪಾದ ಮುಟ್ಟಿ ನಮಸ್ಕರಿಸುತ್ತಾರೆ."

"ವಿದ್ಯಾರಣ್ಯರನ್ನು ನೀನು ನೋಡಿದೆಯಾ ವಾಲಿ?"

"ನೋಡಿದೆ ಸರ್ಕಾರ್. ವಿಜಯನಗರ ನಾನು ಸೇರಿದಾರಭ್ಯ ಎಲ್ಲಿ ನೋಡಿದರೂ ವಿದ್ಯಾರಣ್ಯರ ಹೆಸರೇ ಕೇಳಿಬರುತ್ತಿತ್ತು. ಅವರನ್ನು ಕಾಣಲು ನಾನು ಇಚ್ಛಿಸುವುದಾಗಿ ಮಾರಪ್ಪನಾಯಕರಿಗೆ ತಿಳಿಸಿದೆ. 'ಗಿರಿವನ' ಎಂಬ ಉದ್ಯಾನವನದಲ್ಲಿ ವಿದ್ಯಾರಣ್ಯರ ಭೆಟ್ಟಿ ಮಾಡಿದೆ"

"ಅವರೊಂದಿಗೆ ಏನು ಮಾತನಾಡಿದೆ?"

"ಧರ್ಮ, ರಾಜಕಾರ್ಯ, ಜ್ಯೋತಿಷ್ಯ, ಸಂಗೀತ, ವೈದ್ಯ ಯಾವ ವಿಷಯವೆತ್ತಿದರೂ ವಿದ್ಯಾರಣ್ಯರು ಅಧಿಕಾರವಾಣಿಯಿಂದ ಮಾತನಾಡುತ್ತಾರೆ. ಆ ವ್ಯಕ್ತಿಯು ಪಾಂಡಿತ್ಯ, ತಿಳುವಳಿಕೆ, ಸಹೃದಯ ಕಂಡು ನಾನು ಬೆರಗಾದೆ."

"ಧರ್ಮದ ಬಗ್ಗೆ ಏನು ಮಾತಾಡಿದಿರಿ. ಇಸ್ಲಾಂ ವಿಷಯ ವಿದ್ಯಾರಣ್ಯರು ಏನು ಹೇಳಿದರು."

"ನನ್ನ ಅವರ ಸಂಭಾಷಣೆಯನ್ನು ಸ್ಥೂಲವಾಗಿ ನಿರೂಪಿಸಲೇ?"

"ನಿರೂಪಿಸು."

"'ಸ್ವಾಮಿಜಿ. ಇಸ್ಲಾಂ ಒಂದೇ ಸತ್ಯವಾದ ಧರ್ಮ. ಅದೊಂದರಿಂದಲೇ ಜಗತ್ತಿನ ಮುಕ್ತಿ ಎಂದು ನಮ್ಮ ನಂಬಿಕೆ. ಈ ವಿಷಯದಲ್ಲಿ ತಮ್ಮ ಅಭಿಪ್ರಾಯವೇನು?'

'ಯಾವದು ಸತ್ಯವೋ ಅದೇ ಧರ್ಮ – ಆ ಧರ್ಮ ಒಂದೇ ಒಂದು. ಇಸ್ಲಾಂ, ಆ ಧರ್ಮದ ಶಾಖೆ ಮಾತ್ರ - ಅದರ ಮೂಲಬೇರಲ್ಲ! ವೇದಾಂತ, ಕ್ರಿಸ್ತಧರ್ಮಗಳೂ ಹಾಗೆಯೆ!'

'ಧರ್ಮ ಒಂದು ಎಂದು ಒಪ್ಪಿಕೊಳ್ಳುವ ನೀವು ಹಲವು ದೇವರು

ಗಳ ಪೂಜೆ ಮಾಡುವಿರಿ – ಹಲವು ಗ್ರಂಥಗಳನ್ನೋದುವಿರಿ. ಇಸ್ಲಾಂ ನಂಬುವುದು ಒಬ್ಬನೇ ದೇವರನ್ನು–ಗೌರವಿಸುವಿದು ಒಂದೇ ಗ್ರಂಥವನ್ನು.'

'ಹಿಂದುಗಳು ಹಲವು ದೇವರುಗಳ ಪೂಜೆ ಮಾಡಿದರೂ ಹಿಂದೂ ಧರ್ಮ ನಂಬುವುದು ಒಬ್ಬನೇ ದೇವರನ್ನು. ನಮ್ಮ ದಿವ್ಯಗ್ರಂಥ ಹೇಳುತ್ತದೆ 'ಏಕಂ ಸತ್ ವಿಪ್ರಾ ಬಹುಧಾ ವದಂತಿ' (ಸತ್ ಒಂದೇ – ತಿಳಿದವರು ಅದನ್ನು ಹಲವು ಹೆಸರುಗಳಲ್ಲಿ ಕರೆಯುತ್ತಾರೆ.) – ನಿಮಗೆ ಯಾವದು ಪಾಣಿಯೋ ಅದೇ ನಮಗೆ ಜಲ, ನೀರು. ಪಾಣಿ, ಜಲ, ನೀರು ಬೇರೆ ಬೇರೆ ಪದಾರ್ಥಗಳಲ್ಲವಷ್ಟೇ! – ನಾವು ಹಲವು ಗ್ರಂಥಗಳನ್ನೋದುತ್ತೇವೆಂದು ಆಕ್ಷೇಪಿಸುವಿರಿ. ಧರ್ಮಸಾರವೆಲ್ಲಾ 'ಬ್ರಹ್ಮಸೂತ್ರ' ಗಳಲ್ಲಿ ಕ್ರೋಢೀಕರಿಸಲ್ಪಟ್ಟಿವೆ. ಅವುಗಳ ವಿಸ್ತರಣ, ವ್ಯಾಖೆಯೇ 'ಉಪನಿಷತ್ತುಗಳು.' ಉಪನಿಷತ್ತುಗಳ ಸಾರಸರ್ವಸ್ವವೇ ಭಗವದ್ಗೀತೆ – ಈ ಮೂರೇ ನಮ್ಮ ಆಧಾರಗ್ರಂಥಗಳು – ಇವುಗಳನ್ನೇ ನಾವು 'ಪ್ರಸ್ಥಾನತ್ರಯ'ಗಳೆಂದು ಕರೆಯುವುದು.'

'ದೇವರು ಒಬ್ಬನೇ ಆಗಿದ್ದು, ಧರ್ಮಗ್ರಂಥಗಳು ಹೇಳುವುದೆಲ್ಲಾ ಒಂದೇ ಆಗಿದ್ದರೆ ಮತೀಯ ಜಗಳಗಳೂ, ಧರ್ಮಯುದ್ಧಗಳೂ ಏಕಾಗಬೇಕು.'

'ಇಂದು ಮುಸ್ಲಿಂ ಮುಸ್ಲಿಂನೊಡನೆ ಕಾದಾಡುತ್ತಿಲ್ಲವೇ ?'

'ಕಾದಾಡುತ್ತಿದ್ದಾನೆ.'

'ಏಕೆ – ಇಬ್ಬರೂ ಒಂದೇ ಧರ್ಮಕ್ಕೆ ಸೇರಿದವರಾಗಿರುವಾಗ ಏಕೆ ಕಾದಾಡಬೇಕು.'

'ಸ್ವಾರ್ಥಕ್ಕಾಗಿ !'

'ಎಲ್ಲ ಜಗಳಗಳ ಕಾರಣವೂ ಸ್ವಾರ್ಥ. ಧರ್ಮಕ್ಕಾಗಿ ಹೋರಾಟ ನಡೆಸುವ ಮಾತು ಸುಳ್ಳು. ಧರ್ಮವಿದ್ದೆಡೆ ಹೋರಾಟವಿರುವುದಿಲ್ಲ; ಹೋರಾಟವಿದ್ದೆಡೆ ಧರ್ಮವಿರುವುದಿಲ್ಲ.'

'ಧರ್ಮದ ಜಗಳಗಳನ್ನು ಅಣಗಿಸುವುದು ಹೇಗೆ ಸ್ವಾಮೀಜಿ.'

'ಜನಕ್ಕೆ ಸರಿಯಾದ ಧರ್ಮದ ತಿಳಿವಳಿಕೆ ಕೊಡುವುದರ ಮೂಲಕ. ನಾನು ನಿಮ್ಮ ಧರ್ಮವನ್ನಾಗಲಿ, ಮತಗ್ರಂಥಗಳನ್ನಾಗಲಿ ಆಳವಾಗಿ ಅಭ್ಯಾಸ ಮಾಡಿಲ್ಲ. ಆಗಾಗ್ಗೆ ನಮ್ಮ ದೊಡ್ಡ ಮಸೀದಿಯ ಮೌಲ್ವಿಗಳು ಷೇಕ್ ಇಮಾಮ್ ಇಲ್ಲಿಗೆ ಬರುತ್ತಿರುತ್ತಾರೆ. ಅವರು

ಪವಿತ್ರ ಕೊರಾನಿನ ಕೆಲವು ಭಾಗಗಳನ್ನು ನನಗೆ ಓದಿ ಹೇಳಿದ್ದಾರೆ. ನಾನು ತಿಳಿದಿರುವಂತೆ ಹಿಂದೂಧರ್ಮ ಹೇಳುತ್ತಿರುವುದನ್ನೇ ಇಸ್ಲಾಂ ಹೇಳುತ್ತಿದೆ. ಸಮಾನತೆ, ಸೌಹಾರ್ದ, ಸಮರಸ, ಸಮದರ್ಶನ. ಹಿಂದುಗಳು ಹಿಂದೂ ಧರ್ಮವನ್ನೂ, ಮುಸ್ಲಿಮರು ಇಸ್ಲಾಮನ್ನು ಚೆನ್ನಾಗಿ ಅರಿತರೆ ಸಾಕು. ಇಬ್ಬರೂ ಅಣ್ಣ ತಮ್ಮಂದಿರಂತೆ ಬಾಳಬಹುದು – ನಮ್ಮ ಮೌಲ್ವಿ ಸಾಹೇಬರನ್ನು ಕಂಡಿದ್ದೀರಾ ?'

' ಇಲ್ಲ ಕಂಡಿಲ್ಲ.'

' ಅವರನ್ನು ನೋಡಿ. ಮಹಾ ಸಾತ್ವಿಕ. ಅಪರಿಗ್ರಹ, ಅನಸೂಯೆ, ತ್ಯಾಗ್ಯಮನೋವೃತ್ತಿಗಳನ್ನು ಎಲ್ಲರೂ ಅವರಿಂದ ಕಲಿಯಬೇಕು.'

ಸನ್ಯಾಸಿಯ ಬಾಯಿಂದ ಬಂದ ಮೌಲ್ವಿ ಪ್ರಶಂಸೆ ನನ್ನನ್ನು ಮತ್ತಷ್ಟು ಆಶ್ಚರ್ಯಗೊಳಿಸಿತು. ಮಾರನೆಯ ದಿನ ನಾನು ಮೌಲ್ವಿ ಷೇಕ್ ಇಮಾಮರ ದರ್ಶನ ಪಡೆಯಲು ಹೋದೆ.

ಮೌಲ್ವಿ ಸಾಹೇಬರು, ವಿದ್ಯಾರಣ್ಯರನ್ನು ಒಬ್ಬ ಪ್ರವಾದಿಗಳೆಂದು ಭಾವಿಸಿದ್ದರು. ವಿದ್ಯಾರಣ್ಯರ ಅಭಿಪ್ರಾಯಗಳನ್ನೇ ಅವರೂ ಸಮರ್ಥಿಸಲು ನಾನು

' ಮೌಲ್ವಿ ಸಾಹೇಬರೇ, ನೀವು ಸತ್ಯ ಧರ್ಮಕ್ಕೆ ಸೇರಿದವರಾಗಿ ಒಬ್ಬ ಕಾಫೀರನನ್ನು ಇಷ್ಟು ಪ್ರಸಂಸಿಸುತ್ತಿರುವುದು ನನಗೆ ಪರಮಾಶ್ಚರ್ಯ, ದುಃಖವನ್ನುಂಟುಮಾಡಿದೆ' ಎಂದೆ.

ಮೌಲ್ವಿ ಸಾಹೇಬರು ಗಲ್ಲ ಗಲ್ಲ ಬಡಿದುಕೊಂಡು

' ತೋಬಾ – ತೋಬಾ ಅಂಥ ಮಾತು ಆಡಬಾರದು ವಾಲಿ ಮಹಮದ್. ಇಸ್ಲಾಂ ನನಗರ್ಥವಾದುದೇ ಶ್ರೀವಿದ್ಯಾರಣ್ಯ ಮಹಾ ಮುನಿಗಳಿಂದ.'

' ಮೌಲ್ವಿ ಸಾಹೇಬರೇ, ನಾನೊಂದು ಪ್ರಶ್ನೆ ಕೇಳುತ್ತೇನೆ. ಸರಿಯಾಗಿ ಉತ್ತರ ಹೇಳಿ.'

' ಆಗಬಹುದು.'

' ನಾಳೆ ಈ ಹಿಂದೂ ರಾಜ್ಯಕ್ಕೂ, ಯಾವದಾದರೊಂದು ಮುಸ್ಲಿಂ ರಾಜ್ಯಕ್ಕೂ ಯುದ್ಧ ಸಂಭವಿಸಿದರೆ ನೀವು ಯಾವ ಪಕ್ಷ ವಹಿಸುತ್ತೀರಿ.'

' ಯಾವ ಪಕ್ಷ ವಹಿಸುವುದುಚಿತ ನೀವೇ ಹೇಳಿ.'

'ಇಸ್ಲಾಮಿನ ಧರ್ಮ ಗುರುಗಳಾದ ನೀವು ಇಸ್ಲಾಂ ಭಕ್ತರ ಪಕ್ಷ ವಹಿಸುವುದೇ ಉಚಿತ.'

'ನಮ್ಮಕ್ ಹರಾಂ ಆದವನನ್ನು ಇಸ್ಲಾಂಮಿನ ಭಕ್ತನೆಂದು ಒಪ್ಪಿಕೊಳ್ಳುವಿರಾ ?'

'ಇದರಲ್ಲಿ ನಮ್ಮಕ್‌ಹರಾಮಿ ಎಲ್ಲಿಂದ ಬಂತು ?'

'ವಾಲಿಸಾಬ್, ನಾನು ಜಾತ್ಯಾ ಮುಸ್ಲಿಮನಾದರೂ ಇದೇ ಹಂಪೆಯಲ್ಲಿ ಹುಟ್ಟಿ ಬೆಳೆದವನು. ಆಳುತ್ತಿರುವ ಮಹಾಪ್ರಭುಗಳೂ ಆಳಿದ ಮಹಾಪ್ರಭುಗಳಾದ ಶ್ರೀಶ್ರೀಹರಿಹರರಾಯರೂ ನಮ್ಮನ್ನೆಲ್ಲಾ ಮಕ್ಕಳಂತೆ ನಡೆಸಿಕೊಂಡು ಬಂದಿದ್ದಾರೆ, ಜಾತಿ ವಿದ್ವೇಷಕ್ಕಾಗಲಿ, ಮತಕಲಹಗಳಿಗಾಗಲಿ ನಮ್ಮ ರಾಜ್ಯದಲ್ಲಿ ಅವಕಾಶವೇ ಇಲ್ಲ. ನಾವೂ ಹಿಂದುಗಳು ಅಣ್ಣ ತಮ್ಮಂದಿರಂತೆ ಬಾಳ್ವೆಮಾಡುತ್ತಾ ಬಂದಿದ್ದೇವೆ. ನಮ್ಮ ಮೊಹರಂ ಹಬ್ಬದಲ್ಲಿ ಹಿಂದುಗಳು ವೇಷ ಹಾಕುತ್ತಾರೆ; ಅವರ ಗಣಪತಿ ಹಬ್ಬದಲ್ಲಿ ನಮ್ಮ ಜನ ವೇಷ ಹಾಕುತ್ತಾರೆ. ನಾವಿಬ್ಬರೂ ಕಲೆತು ನವರಾತ್ರಿ ಮಹೋತ್ಸವವನ್ನು ವೈಭವದಿಂದ ಆಚರಿಸುತ್ತೇವೆ—ಹೊರಗಿನಿಂದ ಬರುವ ನೀವು ಜಾತಿಜಗಳ ತಂದೊಡ್ಡಿ ನಮ್ಮ ಮಧುರ ಬಾಂಧವ್ಯಕ್ಕೆ ಹುಳಿ ಹಿಂಡಬೇಡಿ—ಹೊರಗಿನಿಂದ ಹಿಂದುಗಳಾಗಲಿ, ಮುಸ್ಲಿಮರಾಗಲಿ ವಿಜಯನಗರ ಮುತ್ತಿದರೆ ನಾವು ಕುಳಿತಿರುತ್ತೇವೆಂದು ಭಾವಿಸಿರುವಿರಾ. ವಿಜಯನಗರದ ರಕ್ಷಣೆಗಾಗಿ ನಾನೂ ನನ್ನ ಸಕಲ ಮುಸ್ಲಿಂ ಬಾಂಧವರೂ ರಕ್ತ ಚೆಲ್ಲಲು ಸಿದ್ಧರಾಗಿದ್ದೇವೆ. ಈ ವಿಜಯನಗರ ನಮ್ಮದೂ ಆಗಿದೆ ವಾಲಿ ಸಾಹೇಬ್, ತಾಯಿ ತುಂಗಭದ್ರೆ ತನ್ನ ಅಮೃತೋದಕದಿಂದ ಹಿಂದುಗಳನ್ನು ಬೆಳೆಸಿರುವಂತೆ ನಮ್ಮನ್ನೂ ಬೆಳಸಿದ್ದಾಳೆ. ಚಿನ್ನದಂಥ ಈ ಭೂಮಿಯಲ್ಲಿ ಬೆಳೆದ ಭತ್ತ, ಕಬ್ಬು, ಗೋಧಿ, ಜೋಳ ನಾವೂ ತಿಂದಿದ್ದೇವೆ. ಈ ರಾಜ್ಯಕ್ಕೆ ದ್ರೋಹ ಬಗೆಯುವ ಮುಸ್ಲಿಮನನ್ನು ಅಲ್ಲಾ ಕಣ್ಣೆತ್ತಿಯೂ ನೋಡುವುದಿಲ್ಲ.'

ಎಂದು ಆವೇಶಭರಿತರಾಗಿ ನುಡಿದರು.'"

ಸುಲ್ತಾನರ ಮನಸ್ಸು ಅಸ್ತವ್ಯಸ್ತವಾಯಿತು. ಭಾರತಾದ್ಯಂತ ವ್ಯಾಪಿಸಿದ್ದ ಮುಸ್ಲಿಮರು ತಮ್ಮ ರಾಜ್ಯವಿಸ್ತರಣೆಗೆ ನೆರವಾಗುತ್ತಾರೆಂಬ ಕನಸು ತಿರುಕನ ಕನಸಾಗಿತ್ತು.

"ನಿನ್ನ ವಿಷಯಸಂಗ್ರಹ ಅಮೌಲ್ಯವಾಗಿದೆ ವಾಲಿ. ವಿಜಯನಗರ

ವನ್ನು ತರುವಾಯ ವಿಚಾರಿಸಿಕೊಳ್ಳೋಣ. ಮೊದಲು ಓರುಗಲ್ಲಿನ ಕಥೆ ಮುಗಿಸಬೇಕಾಗಿದೆ. ಬೆವಕೂಫ್ ವಾಹಿದ್ ಖಾ ಹೋದ ಕೆಲಸ ಅರೆವಾಸಿ ಮಾಡಿಕೊಂಡಿದ್ದಾನೆ. ಈ ಬಾರಿ ನಾನೇ ಸೈನ್ಯಗಳನ್ನು ನಡಸುತ್ತೇನೆ. ನೀನು ನನ್ನ ಬಲಭಾಗದಲ್ಲಿ, ವಾಹಿದ್ ಎಡಭಾಗದಲ್ಲಿರಿ."

"ಓರುಗಲ್ಲಿಗೆ ಯಾವಾಗ ಪ್ರಯಾಣ ಹುಜೂರ್."

"ಹುಣ್ಣಿಮೆ ಕಳೆದ ಹತ್ತು ದಿನಗಳ ತರುವಾಯ. ಓರುಗಲ್ಲಿನ ಪ್ರಥಮ ವಿಜಯದಿಂದ ಪ್ರಸುತ್ತರಾದ ನಮ್ಮ ಸೈನಿಕರು, ಆಲಸಿಗರಾಗದಂತೆ ನೋಡಿ ಕೊಳ್ಳುವುದು ನಿನ್ನ ಕರ್ತವ್ಯ."

"ಹುಕುಂ ಸರ್ಕಾರ್"

ಎಂದು ವಾಲಿ ಮಹಮುದ್ ಸುಲ್ತಾನರಿಗೆ ಸಲಾಮು ಮಾಡಿ ರಾಜ ಮಹಲಿನಿಂದ ಹೊರಬಿದ್ದ.

## ೧೮

ಓರುಗಲ್ಲಿನ ಹೊರವಲಯದಲ್ಲಿ ಬೀಡು ಬಿಟ್ಟಿದ್ದ ಸುಲ್ತಾನರ ಸೈನ್ಯ ವನ್ನೆದುರಿಸಲು ಓರುಗಲ್ಲಿನ ಸೈನ್ಯ ಮುನ್ನುಗ್ಗಿತು. ಸ್ವಯಂ ಸೈನ್ಯ ನಡೆಸುತ್ತಿದ್ದ ವಿನಾಯಕದೇವರ ಇಕ್ಕೆಲಗಳಲ್ಲಿ ಭೀಮದೇವರೂ, ಕುಲವಂತ ದಿವ್ಯಾಶ್ವ ಗಳನ್ನೇರಿ ಕುಳಿತಿದ್ದರು.

ಇಳಿ ವಯಸ್ಸಿನ ಭೀಮದೇವ, ಎಳೆ ಹರೆಯದ ಕುಲವಂತರನ್ನು ಕೂಡಿ ಕೊಂಡು ಬರುತ್ತಿದ್ದ ವಿನಾಯಕ ದೇವರನ್ನು ಕಂಡು ಗಹಗಹಸಿ ನಗುತ್ತ ಸುಲ್ತಾನರು

"ನೋಡಿದೆಯಾ ವಾಲಿ, ಹೇಗಿದ್ದಾರೆ ಎದುರು ಪಕ್ಷದ ವೀರರು"

ಎಂದು ಅಪಹಾಸ್ಯ ಮಾಡಿದರು.

ಸಂಜೆಯೊಳಗಾಗಿ ಓರುಗಲ್ಲಿನ ಸಹಸ್ರಾರು ಸೈನಿಕರು ಮಡಿದಿದ್ದರು.

ಸುಲ್ತಾನರ ಪಕ್ಷಕ್ಕೂ ಅಪಾರ ನಷ್ಟವಾಗಿತ್ತು.

"ವಿನಾಯಕದೇವರಲ್ಲಿ ಇಷ್ಟು ತ್ರಾಣ ಉಳಿದಿದೆಯೆಂದು ನಾನು ಭಾವಿಸಿರಲಿಲ್ಲ ವಾಲಿ"

ಎಂದರು ಸುಲ್ತಾನರು.

"ಇವತ್ತಿನ ಯುದ್ಧವೆಲ್ಲಾ, ಅವರ ಎಡಬಲಗಳಲ್ಲಿರುವ ಹುಡುಗ, ಮುದುಕನದು ಹುಜೂರ್. ಮುದುಕನ ಕತ್ತಿಯ ಪೆಟ್ಟಿಗೆ ನಮ್ಮ ಸೈನಿಕರು ತತ್ತರಿಸಿ ಹೋಗಿದ್ದಾರೆ."

"ನಾಳೆ ಈ ಯುದ್ಧ ಮುಗಿಯಲೇಬೇಕು. ಓರುಗಲ್ಲಿನ ಮೇಲೆ ನಾವು ದಿವಸಗಟ್ಟಲೆ ಯುದ್ಧಮಾಡುವುದೆಂದರೆ ನಾಚಿಗೆಗೇಡು. ನಾಳೆ ನೀನು ಹುಡುಗನನ್ನು ವಿಚಾರಿಸಿಕೊ-ನಾನು ಮುದುಕನನ್ನು ನೋಡಿಕೊಳ್ಳುತ್ತೇನೆ."

ಎಂದು ತಮ್ಮ ವಸ್ತ್ರವೇಶ್ಮ ಹೊಕ್ಕರು.

ಸುರೈಯ್ಯಾ, ಗುಲ್‌ಷನ್ ಸುಲ್ತಾನರ ಸ್ನಾನಕ್ಕೆ ನೀರು ಸಿದ್ಧಪಡಿಸಿದ್ದರು. ಬಗೆಬಗೆಯ ಪರಿಮಳ ತೈಲಗಳನ್ನು ಸುಲ್ತಾನರ ಮೈಗೆ ಲೇಪಿಸಿ, ಸುಖೋಷ್ಣ ನೀರಿನಲ್ಲಿ ಅವರಿಗೆ ಸ್ನಾನ ಮಾಡಿಸಿ ಅವರನ್ನು ಉಪಚರಿಸಿದರು.

ಬೆಳಗಾಯಿತು.

ಉಭಯ ಪಕ್ಷದಲ್ಲಿಯೂ ವಾದ್ಯಗಳು ಮೊಳಗಿದವು.

ಸೂರ್ಯೋದಯವಾಗುತ್ತಿದ್ದಂತೆ ಕದನಾರಂಭವಾಯಿತು.

ಸಮಬಲದಿಂದ ಕಾಯುತ್ತಿದ್ದ ಸೈನ್ಯಗಳಲ್ಲಿ ವಿಜಯ ಯಾರಿಗೆ ಲಭ್ಯವೆಂದು ಹೇಳುವುದೇ ದುಸ್ಸಾಧ್ಯವಾಗಿತ್ತು.

ಸುಲ್ತಾನರು ಹಲವು ಸಾರೆ ಭೀಮದೇವರನ್ನು ಎದುರಿಸಲು ಯತ್ನಿಸಿದರು. ಅವರು ಕೈಗೆ ಸಿಕ್ಕದಂತೆ ನುಸುಳಿಕೊಂಡು ಸುಲ್ತಾನರ ರಕ್ಷಣಾ ಬಲವನ್ನು ಪುಡಿಗುಟ್ಟುತ್ತಿದ್ದರು. ಭೀಷಣ ಕೋಪಾಗ್ನಿಯಿಂದ ಉರಿಯುತ್ತಿದ್ದ ಸುಲ್ತಾನರು, ಸೈನಿಕರನ್ನು ಹುರಿದುಂಬಿಸುತ್ತಾ, ಅಸೀಮಬಲದಿಂದ ಕಾಯುತ್ತಿದ್ದರು.

ವಿನಾಯಕದೇವರ ಎಡಮಗ್ಗುಲಿನಲ್ಲಿದ್ದ ಕುಲವಂತನನ್ನು ಸುಲ್ತಾನರ ಸೈನ್ಯದ ಒಂದು ತುಕಡಿ ಪ್ರತ್ಯೇಕಿಸಿತು. ಏಕಾಂಗಿಯಾಗಿ ನಿಂತ ಕುಲವಂತನನ್ನು ವಾಲಿ ಮಹಮುದ್ ಎದುರಿಸಲು ಧಾವಿಸಿಬಂದ. ಅವನನ್ನು ನುಸರಿಸಿ, ರಕ್ಷಣೆ ನೀಡಲು ಬಂದ ಸೈನ್ಯದ ತುಕಡಿಯನ್ನು ದೂರ ನಿಲ್ಲಿಸಿ, ತಾನೊಬ್ಬನೇ ಮುಂದೆ ಬಂದ ವಾಲಿ ಮಹಮುದ್,

" ವಹವ್ವಾ - ಬಹದ್ದೂರ್ - ವಯಸ್ಸಿನಲ್ಲಿ ಚಿಕ್ಕವನಾದರೂ ಪ್ರೌಢ ಪ್ರತಾಪಿಯಾದ ನಿನಗೆ ವಾಲಿ ಮಹಮದ್ ಸಲಾಮು ಮಾಡುತ್ತಾನೆ "

ಎಂದು ಕತ್ತಿಬೀಸಿ, ಸಲಾಮು ಸಲ್ಲಿಸಿ

" ಕುದುರೆಯಿಂದಿಳಿದು ಕಾದೋಣವೋ-ಕೆಳಗಿಳಿದು ಕಾದೋಣವೋ?"

" ನಿಮ್ಮ ಇಚ್ಛೆ."

" ಬಹುತ್ ಅಚ್ಛಾ"

ಎಂದವನೇ ವಾಲಿ ಮಹಮದ್ ಬಲವಾಗಿ ತನ್ನ ಕುದುರೆಯನ್ನು ಕುಲವಂತನ ಕಡೆ ನುಗ್ಗಿಸಿದ.

ಅವನ ಚಲನವಲನ ನಿರೀಕ್ಷಿಸುತ್ತಿದ್ದ ಕುಲವಂತ, ಮಿಂಚಿನ ವೇಗದಲ್ಲಿ ತನ್ನ ಕುದುರೆಯನ್ನು ಹಿಂದಕ್ಕೆ ಸರಿಸಿ, ತನ್ನ ಕತ್ತಿಯನ್ನು ಪ್ರಯೋಗಿಸಿದ. ವಾಲಿ ಮಹಮದನ ಕುದುರೆಯ ಒಂದು ಲಗಾಮು ಹರಿದುಹೋಯಿತು. ಉಳಿದ ಲಗಾಮನ್ನೇ ಕೈಯಲ್ಲಿ ಹಿಡಿದು ವಾಲಿ, ಕುಲವಂತನಮೇಲೆ ಕತ್ತಿ ಬೀಸಲು, ಆ ಪೆಟ್ಟನ್ನು ತನ್ನ ಕತ್ತಿಯಮೇಲೆ ಸ್ವೀಕರಿಸಿದ. ಇಬ್ಬರ ಖಡ್ಗಗಳು ಖಣ - ಖಣಿಲ್ ನಾದಮಾಡಿದವು. ಇಡಿಯ ಸೈನ್ಯ ಆ ಮಹಾವೀರರ ಕಾಳಗ ನೋಡುತ್ತ ದಿಗ್ಭ್ರಾಂತಿಯಿಂದ ನಿಂತಿತು.

ಕುಲವಂತ ಕೊಡುತ್ತಿದ್ದ ಪೆಟ್ಟು, ತನ್ನ ಪೆಟ್ಟನ್ನು ತಪ್ಪಿಸಿಕೊಳ್ಳುತ್ತಿದ್ದ ಜಾಣ್ಮೆ ಕಂಡು ಮೆಚ್ಚುತ್ತಿದ್ದ ವಾಲಿಯ ಬಾಯಲ್ಲಿ ಆಗಿಂದಾಗ್ಗೆ

" ವಹವ್ವಾ - ಶಹಭಾಸ್ !"

ಎಂಬ ಮೆಚ್ಚುಗೆಯ ನುಡಿಗಳು ಹೊರಬೀಳುತ್ತಿದ್ದವು.

ವಾಲಿಯ ಕದನಕೌಶಲ್ಯ ಕಂಡು ಮಾರುಹೋಗಿದ್ದ ಕುಲವಂತ

" ಭಲೆ ಭಲೆ ಬಹದ್ದೂರ್ - ಕಾದಿದರೂ ನಿನ್ನಂಥ ವೀರನೊಂದಿಗೆ ಕಾದಬೇಕು."

ಎಂದು ಉದ್ಗಾರವೆಳೆಯುತ್ತಿದ್ದ.

ಸುಮಾರು ನಾಲ್ಕರ ವೇಳೆಗೆ ಕುಲವಂತನ ಕೈ ಸೋಲುತ್ತ ಬಂದಿತು. ಅದನ್ನು ಗಮನಿಸಿದ ವಾಲಿ, ಎದೆಗೆ ಗುರಿಯಿಟ್ಟಿದ್ದ ಒಂದು ಪೆಟ್ಟನ್ನು ಕುಲವಂತನ ಕತ್ತಿಯ ಕಡೆ ತಿರುಗಿಸಿದ. ಕುಲವಂತನ ಕತ್ತಿ ಕೆಳಗೆ ಬಿತ್ತು.

ಅಶ್ವದಿಂದಿಳಿದು ಕುಲವಂತ ನಿಃಶಸ್ತ್ರನಾಗಿ ನಿಂತು

" ಬಾ - ವಾಲಿ ಮಹಮದ್ - ಶತ್ರುವನ್ನು ಸಂಹರಿಸಲು ಇದೇ ಸುಸಮಯ "

ಎಂದು ಕೂಗಿದ.

ಕುದುರೆಯಿಂದ ಧುಮುಕಿ ಅವನತ್ತ ಧಾವಿಸಿ ಓಡಿಹೋದ ವಾಲಿ ತನ್ನ ಕತ್ತಿ ಬಿಸುಟು, ಗಾಢವಾಗಿ ಕುಲವಂತನನ್ನಪ್ಪಿ

"ನಿಃಶಸ್ತ್ರನಾದ ನಿನ್ನನ್ನು ಕೊಂದರೆ ಖುದಾ ಮೆಚ್ಚುತ್ತಾನೆಯೇ ಬಹದ್ದೂರ್."

"ವಾಲಿ ಮುಹಮ್ಮದ್, ಕತ್ತಿಯೆತ್ತಿಕೊಳ್ಳುತ್ತೇನೆ. ಕಾದಾಟ ಮುಂದುವರಿಸೋಣ."

ವಾಲಿ ಮುಹಮುದ್ ಅವನ ಖಡ್ಗದಮೇಲೆ ಪಾದವೂರಿ

"ಇವತ್ತು ಸಾಕು ಕುಲವಂತ. ನೀನು ತುಂಬ ದಣಿದಿದ್ದೀ. ಇನ್ನು ಕಾದುವುದರಲ್ಲಿ ಅರ್ಥವಿಲ್ಲ. ನಾನು ಸೋತರೆ ಸುಲ್ತಾನರ ಮುಖ ನೋಡಲಾರೆ – ಗೆದ್ದರೆ ಖುದಾನ ಮುಖ ನೋಡಲಾರೆ. ಇಂದಿಗೆ ಯುದ್ಧ ಸಾಕುಮಾಡಿ, ನಾಳೆ ಮುಂದುವರಿಸೋಣ"

ಎಂದು ತನ್ನ ಕುದುರೆಯೇರಿ, ಸುಲ್ತಾನರ ಸೈನ್ಯವಿದ್ದೆಡೆಗೆ ನಡೆದುಬಿಟ್ಟ.

ಸಂಜೆ ಕದನ ವಿರಾಮಾನಂತರ ವಸ್ತ್ರವೇಶ್ಮಕ್ಕೆ ಹಿಂದಿರುಗಿದ ಸುಲ್ತಾನರು ಯೋಚನಾಕ್ರಾಂತರಾಗಿ ಪಲ್ಲಂಕದಮೇಲೆ ಕುಳಿತರು ಸುರೈಯ್ಯಾ ತಂದಿತ್ತ ಷರಬತ್ತಿನ ಬಟ್ಟಲು ಅವರ ಕೈಯಲ್ಲಿಯೇ ಉಳಿದಿತ್ತು.

ವಿಮನಸ್ಕರಾಗಿದ್ದ ಸುಲ್ತಾನರು

"ಹೊರಗಿರುವ ಸಿಪಾಯಿಯನ್ನು ಕರೆ ಸುರೈಯ್ಯಾ" ಎಂದರು.

ಸುರೈಯ್ಯಾ ಚಪ್ಪಾಳೆ ತಟ್ಟಲು ಸಿಪಾಯಿ ಒಳಗೆ ಬಂದು ಬಾಗಿಲು ಬಳಿ ನಿಂದು ಸುಲ್ತಾನರಿಗೆ ಮುಜರೆಮಾಡಿದ.

"ಕೂಡಲೆ ಸರ್ದಾರ್ ವಾಲಿ ಮುಹಮುದರನ್ನು ಇಲ್ಲಿಗೆ ಬರಮಾಡು." ಎಂದರು.

ಸಿಪಾಯಿ ಹೊರಗೆ ಹೋಗಲು, ಸುರೈಯ್ಯಾ ಸುಲ್ತಾನರ ಕೈಯಲ್ಲಿದ್ದ ಷರಬತ್ತಿನ ಬಟ್ಟಲನ್ನು ತನ್ನ ಕೈಗೆತ್ತಿಕೊಂಡು ಸುಲ್ತಾನರಿಗೆ ಕುಡಿಸುತ್ತಾ

"ಏಕಿಷ್ಟು ಬೇಸರಗೊಂಡಿರುವಿರಿ" ಎಂದು ಕೇಳಿದಳು.

"ಇನ್ನು ಸ್ವಲ್ಪಹೊತ್ತಿನಲ್ಲಿ ಎಲ್ಲವೂ ನಿನಗೆ ವಿಶದವಾಗುತ್ತದೆ – ವಾಲಿಯೂ ನಮಗೆ ದ್ರೋಹ ಬಗೆಯುತ್ತಿರಬಹುದೇ?"

"ಹಾಗೆ ಹೇಳಿದವರು!"

" ವಾಹಿದ್ ಖಾನರು."

" ವಾಹಿದ್ ಖಾನರು ಅಸೂಯಾಗ್ರಸ್ತರಾಗಿದ್ದಾರಷ್ಟೆ !"

" ಇರಲಿ – ನೋಡುವ".

ವಾಲಿ ಮಹಮುದ್ ವೇಶ್ಮದ ಹೊರ ಬಾಗಿಲಲ್ಲಿನಿಂತು

" ಬಂದಿದ್ದೇನೆ ಹುಜೂರ್ " ಎಂದ.

" ಒಳಗೆ ಬಾ ವಾಲಿ."

ಒಳಗೆ ಬಂದ ವಾಲಿಯನ್ನು ಸುಲ್ತಾನರು ಕೂಡಲು ಹೇಳಲಿಲ್ಲ. ಅವನತ್ತ ಸಂಶಯದಿಂದ ನೋಡಿ,

" ಇವತ್ತು ಯುದ್ಧದಲ್ಲಿ ಏನಾಯಿತು ವಾಲಿ ?" ಎಂದರು.

" ನಿನ್ನಿನ ಅನಿಶ್ಚಿತ ಪರಿಸ್ಥಿತಿಯೇ ಮುಂದುವರಿದಿದೆ ಹುಜೂರ್."

" ಇದಕ್ಕೆ ಯಾರು ಜವಾಬುದಾರರು ?"

" ..............."

" ಕೈಗೆ ಸಿಕ್ಕಿದ ಕುಲವಂತನನ್ನು ನೀನೇಕೆ ಬಿಟ್ಟೆ."

" ಹುಜೂರರವರಿಗೆ ಯಾರೋ ನನ್ನ ಮೇಲೆ ಚಾಡಿ ಹೇಳಿದ್ದಾರೆ."

" ಕೇಳಿದ ಪ್ರಶ್ನೆಗೆ ಉತ್ತರ ಹೇಳು."

ಸಂದರ್ಭವನ್ನು ವಿವರವಾಗಿ ವರ್ಣಿಸಿದ ವಾಲಿ ಮಹಮುದ್

" ನಿಃಶಸ್ತ್ರನಾದ ವೀರನನ್ನು ಕೊಲ್ಲಲು ಮನಸ್ಸಾಗಲಿಲ್ಲ ಸರ್ಕಾರ್."

" ಇನ್ನು ಇಂಥ ಅವಕಾಶ ನಿನಗೆ ಸಿಕ್ಕುವುದೇ ?"

" ..............."

" ಈ ಯುದ್ಧದಲ್ಲಿ ನಾವು ಜಯಗಳಿಸಿ ಬೇಗ ರಾಜಧಾನಿಗೆ ಹಿಂದಿರುಗ ಬೇಕು. ಅನವಶ್ಯಕ ಧರ್ಮ ಜಿಜ್ಞಾಸೆಮಾಡುತ್ತ ಕೂಡುವುದಕ್ಕೆ ಕಾಲಾವ ಕಾಶವಿಲ್ಲ – ಅರ್ಥವಾಯಿತೇ ?"

" ಆಯಿತು ಹುಜೂರ್."

" ನಾಳೆ ಕುಲವಂತನ ಕೊನೆಯಾಗಲೇಬೇಕು."

" ಪ್ರಯತ್ನಿಸುತ್ತೇನೆ. ಫಲಿತಾಂಶ ಅಲ್ಲಾನ ಅಧೀನ."

" ನೀನಿನ್ನು ಹೋಗಬಹುದು."

ಎಂದು ಗಡಸು ಧ್ವನಿಯಲ್ಲೇ ನುಡಿದರು.

ವಾಲಿ ಮಹಮುದ್ ಹೋಗುತ್ತಲೆ ಸುಲ್ತಾನರ ಸಮೀಪದಲ್ಲಿ ಬಂದು

ಕುಳಿತ ಸುರೈಯ್ಯಾ

"ವಾಲಿ ಮಹಮುದರು ಯಾವ ಅಪರಾಧವನ್ನು ಮಾಡಿದಂತೆ ನನಗೆ ಕಂಡು ಬರಲಿಲ್ಲ ಸರ್ದಾರ್. ಅವರ ವಿರೋಚಿತ ಕಾರ್ಯಕ್ಕೆ ತಾವು ಮೆಚ್ಚುಗೆ ವ್ಯಕ್ತಮಾಡಬೇಕಾಗಿತ್ತು." ಎಂದಳು.

ಸುಲ್ತಾನರು ಹುಬ್ಬುಗಂಟುಹಾಕಿಕೊಂಡು

"ಇದೆಲ್ಲಾ ನಿನಗರ್ಥವಾಗುವುದಿಲ್ಲ – ಸುಮ್ಮನಿರು ಸುರೈಯ್ಯಾ"

ಎಂದವಳನ್ನು ಗದರಿದರು.

## ೧೯

ಎರಡನೆಯ ದಿನ, ತನ್ನ ಶೌರ್ಯ ಪ್ರತಾಪ ಮೆರಸಿ, ಸುಲ್ತಾನರ ಮೆಚ್ಚುಗೆಗೆ ಪಾತ್ರನಾಗಬೇಕೆಂದು ನಿಶ್ಚಯಿಸಿದ್ದ ಸರ್ದಾರ್ ವಾಹಿದ್‌ಖಾನ್, ಭೀಮದೇವರ ವ್ಯೂಹ ಮುರಿದು, ಅವರನ್ನು ಪ್ರತ್ಯೇಕಿಸಿದ.

ರಣಪಂಡಿತರಾಗಿದ್ದ ಭೀಮದೇವರು ಸೈನಿಕರಿಗೆ ಹುರುಪುಕೊಡುತ್ತಾ ಒಂದೇ ಸಮನಾಗಿ ಕಾದಿದರು. ಮಧ್ಯಾಹ್ನದವೇಳೆಗೆ ಭೀಮದೇವರ ಕೈ ಇಳಿಮುಖವಾಗುತ್ತಾ ಬಂದಿತು. ಸಮಯಸಾಧಿಸುತ್ತಿದ್ದ ವಾಹಿದ್‌ಖಾನ್, ಭೀಮದೇವರ ಮೇಲೆ ಕುದುರೆ ಹಾಯಿಸಿ ಅವರನ್ನು ಇರಿದುಬಿಟ್ಟ.

ವಿನಾಯಕದೇವರು, ಅವರ ಸೈನಿಕರು ದಿಗ್ಭ್ರಾಂತರಾದರು. ಭೀಮದೇವರ ಮೃತ್ಯುವನ್ನು ಕಂಡ ಸೈನಿಕರು ಹೆದರಿ ಓಡಬಹುದೆಂದು ತರ್ಕಿಸಿದ ಕುಲವಂತ ಕತ್ತಿ ಝಳಪಿಸುತ್ತ ಸೈನಿಕರಲ್ಲಿ ನವಶಕ್ತಿಯನ್ನು ತುಂಬಲು ಯತ್ನಿಸಿದ.

ಸ್ಥೈರ್ಯಗೆಟ್ಟಿದ್ದ ಸೈನ್ಯವನ್ನು ಪುನರುಜ್ಜೀವನಗೊಳಿಸಿ ಚಂಡಮಾರುತ ದಂತೆ ಯುದ್ಧರಂಗವನ್ನು ವ್ಯಾಪಿಸಿದ್ದ ಕುಲವಂತನ ಅತುಳ ಪರಾಕ್ರಮ ಕಂಡು ವಾಲಿ ಮುಹಮುದ್ ಹರ್ಷಗೊಂಡಿದ್ದ.

ಅಂದಿನ ಯುದ್ಧಜ್ವಾಲೆ ಸುಲ್ತಾನರ ಸೈನಿಕರನ್ನೇ ಹೆಚ್ಚು ಹೆಚ್ಚಾಗಿ

ಕಬಳಿಸುತ್ತಿತ್ತು. ಸುಲ್ತಾನರ ಕತ್ತಿಯ ಪೆಟ್ಟು ಶತ್ರುಗಳನ್ನೂ, ನಾಲಗೆ ಸ್ವಕೀಯರನ್ನೂ ಪ್ರಹರಿಸುತ್ತಿದ್ದವು.

ವಾಹಿದ್, ವಿನಾಯಕದೇವರ ಸುತ್ತ ವ್ಯೂಹ ರಚಿಸುತ್ತ, ಅವರನ್ನು ಸೆರೆ ಹಿಡಿಯಲೆತ್ನಿಸುತ್ತಿದ್ದ.

ತನ್ನ ಸೈನ್ಯದ ತುಕಡಿಯಿಂದ ಹೊರಬಿದ್ದ ಕುಲವಂತ, ವಾಲಿಯನ್ನರಸುತ್ತ ಬಂದು

"ವಾಲಿ ಮಹಮುದ್, ನಿನ್ನಿನ ಅಪೂರ್ಣವಾದ ಸಮರ ಮುಂದುವರಿಸಲು ಬಂದಿದ್ದೇನೆ" ಎಂದ.

ವಾಲಿ ಹೋರಾಡಲು ಸಿದ್ಧನಾದ.

ಉಭಯ ಪಕ್ಷಗಳಿಗೂ ಭೀಷಣ ಕದನ ಸಾಗಿದ್ದಂತೆ ವಾಲಿ, ಕುಲವಂತರ ಕತ್ತಿಗಳು ಸಂಘಟ್ಟಿಸಿದವು,

ದ್ವಂದ್ವಯುದ್ಧದ ಫಲಿತಾಂಶ ಏನಾಗುವುದೋ ಎಂದು ಉಭಯ ಸೇನೆಗಳೂ ನಿರೀಕ್ಷಿಸುತ್ತಿದ್ದವು. ಒಮ್ಮೆ ಕುಲವಂತನ ಕೈ ಮೇಲಾದರೆ ಒಮ್ಮೆ ವಾಲಿಯ ಕೈ ಮೇಲಾಗುತ್ತಿತ್ತು.

ಇಬ್ಬರ ಕುದುರೆಗಳೂ ಮೈ ಮೈ ತಾಕಿಸಿ ನಿಂತವು. ವಾಲಿ, ಕುಲವಂತ ಇಬ್ಬರ ಗುರಾಣಿಗಳೂ, ಕತ್ತಿಯ ಹೊಡೆತದಿಂದ ತಗ್ಗಿ ಚಪ್ಪಟೆಯಾಗಿದ್ದವು. ವಾಲಿಯ ಕುದುರೆಯನ್ನು ಬಳಸಿಕೊಂಡು ವಾಮಪಾರ್ಶ್ವಕ್ಕೆ ಬಂದ ಕುಲವಂತನ ಕತ್ತಿ ವಾಲಿಯ ಎಡ ತೋಳನ್ನಿರಿಯಿತು. ಕಿರುಗಾಲವೆಯಂತೆ ರಕ್ತ ಹರಿಯುತ್ತಿದ್ದರೂ, ಲೆಕ್ಕಿಸದೆ ವಾಲಿ ಕುದುರೆಯನ್ನೊಮ್ಮೆ ಗಿರ್ರನೆ ತಿರುಗಿಸಿ, 'ಇನ್‌ಷಾ ಅಲ್ಲಾ' ಎಂದು ಘೋಷಿಸುತ್ತ, ಕತ್ತಿಯನ್ನು ಪ್ರಯೋಗಿಸಿದ.

ಕುಲವಂತನ ಬಲಪಕ್ಕದಲ್ಲಿ ನೆಟ್ಟಕತ್ತಿ ಅವನ ಹೃದಯ ಹೊಕ್ಕಿರಿಯಿತು.

ಕುಲವಂತ ಕುದುರೆಯಿಂದ ಬಿದ್ದುದನ್ನು ಕಂಡ ವಾಲಿ, ಚಂಗನೆ ಹಾರಿ ಕೆಳಗೆ ಬಂದವನೇ, ಕುಲವಂತನ ತಲೆಯನ್ನೆತ್ತಿ ತೊಡೆಯ ಮೇಲಿಟ್ಟು ಕೊಂಡು ತನ್ನ ಮುಂಡಾಸು ಬಿಚ್ಚಿ, ಕುಲವಂತನ ಗಾಯದ ಮೇಲೆ ಬಿಗಿದ.

ಆ ಕರ್ಮವೈಪರೀತ್ಯ ಕಂಡು ಕುಲವಂತನ ಮುಖದ ಮೇಲೆ ನಗೆ ಮಿನುಗಿತು.

ವಾಲಿಯ ಕಣ್ಣುಗಳಿಂದ ಹನಿಗಳುದುರುತ್ತಿದ್ದುದನ್ನು ಕಂಡ ಕುಲವಂತ,

"ಏಕೆ ದುಃಖಿಸುವೆ ವಾಲಿ. ಜಯಾಪಜಯ ಯಾರಧೀನ. ನಿನ್ನಂಥ

ವೀರನ ಖಡ್ಗಕ್ಕೆ ಎರವಾದುದೂ ಒಂದು ಪುಣ್ಯವೆಂದೇ ಭಾವಿಸುತ್ತೇನೆ."

"ನಿನ್ನನ್ನು ಕೊಲ್ಲಬಾರದಾಗಿತ್ತು ದೋಸ್ತ್. ನಾನು ಮಹಾಪರಾಧ ಮಾಡಿದೆ."

"ಅವಕಾಶಸಿಕ್ಕಿದ್ದರೆ ನಾನು ನಿನ್ನನ್ನು ಕೊಲ್ಲುತ್ತಿದ್ದೆ. ಮೃತ್ಯುದೇವತೆಯ ಮಹಾಮನೆಯಾದ ಈ ರಣರಂಗದಲ್ಲಿ, ನನ್ನ ಪ್ರಿಯಬಂಧು ವಾಲಿ ಮಹಮದನ ತೊಡೆಯಮೇಲೆ ಸಾಯುತ್ತಿದ್ದೇನೆಂದು ನನಗೆ ಹೆಮ್ಮೆಯಾಗಿದೆ. ಮುಂದೆ........ಯುದ್ಧ, ಜಗಳ, ಅಶಾಂತಿ ಇಲ್ಲದ ಲೋಕದಲ್ಲಿ ನಾವಿಬ್ಬರೂ ಮತ್ತೆ ಭೆಟ್ಟಿಯಾಗೋಣ."

ಎಂದನ್ನುತ್ತಿದ್ದಂತೆ ಅವನ ಕಣ್ಣುಗಳು ಮುಚ್ಚಿಹೋದವು.

ಅವನ ತಲೆಯನ್ನು ನೆಲದ ಮೇಲೆ ಇಳುಹಿ, ವಾಲಿ ಮಹಮದ್ ಸೈನ್ಯದ ತುಕಡಿಯ ನಾಯಕ ಅಜ್ಮಲನನ್ನು ಕರೆದು

"ಶವವನ್ನು ಗೌರವಯುತವಾಗಿ ಕಂಡು, ವಿನಾಯಕದೇವರ ಸೈನ್ಯಕ್ಕೆ ಒಪ್ಪಿಸಿಬಿಡಿ"

ಎಂದು ಆಜ್ಞೆ ವಿಧಿಸಿ ರಣರಂಗಬಿಟ್ಟು ಹೊರಟು ಹೋದ.

ಕುಲವಂತನ ಸಾವು, ಯುದ್ಧದ ಭರತವಾಕ್ಯ ಹಾಡಿತು.

ಕುಲವಂತನನ್ನು ಕಾಣದಾದ ಓರುಗಲ್ಲಿನ ಸೈನಿಕರು ಧೃತಿಗೆಟ್ಟರು. ರಣರಂಗ ಬಿಟ್ಟು ಓಡಿಹೋಗಲೆತ್ನಿಸಿದ ವಿನಾಯಕದೇವರನ್ನು ವಾಹಿದ್ ಖಾನ ಸೆರೆ ಹಿಡಿದುತಂದು ಸುಲ್ತಾನರ ಮುಂದೆ ನಿಲ್ಲಿಸಿದ.

"ದೊಡ್ಡ ಚಿತೆಯೊಂದನ್ನೇರ್ಪಡಿಸಿ, ವಿನಾಯಕದೇವನನ್ನು ಅದರಲ್ಲಿ ಹಾಕಿ ಸುಟ್ಟುಬಿಡಿ"

ಎಂದು ಸುಲ್ತಾನರು ಆಜ್ಞೆಮಾಡಿ, ತಮ್ಮ ಬಿಡಾರಕ್ಕೆ ತೆರಳಿದರು.

ವಿನಾಯಕದೇವರ ಸೈನ್ಯ ದಿಕ್ಕುಪಾಲಾಗಿ ಚದುರಿಹೋಯಿತು. ರಾಜಧಾನಿಯ ಸಹಸ್ರಾರು ಸ್ತ್ರೀಯರು, ವಿನಾಯಕದೇವರ ಮನೆತನದ ಹೆಣ್ಣುಮಕ್ಕಳು ಅಗ್ನಿಪ್ರವೇಶಮಾಡಿದರು.

ಬಾವುಟ ಬತೇರಿಯ ಮೇಲಿದ್ದ ಓರುಗಲ್ಲಿನ ಬಾವುಟವನ್ನಿಳುಹಿ ಸುಲ್ತಾನರ ಸೈನಿಕರು ಕಲ್ಬುರ್ಗಿಯ ಬಾವುಟವೇರಿಸಿದರು.

ಪೂರ್ಣ ವಿಜಯಿಯಾಗಿ ಬಿಡಾರಕ್ಕೆ ಬಂದ ಸುಲ್ತಾನರು, ಕಾಪಿನ ಭಟನನ್ನು ಕರೆದು

" ಕೂಡಲೆ ಸರ್ದಾರ್ ವಾಲಿ ಸಾಹೇಬರನ್ನು ಬರಮಾಡು " ಎಂದರು.

ಕ್ಷಣಾರ್ಧದಲ್ಲಿ ಹಿಂದಿರುಗಿದ ಕಾಪಿನಭಟ ಅವನತಮುಖನಾಗಿ ನಿಂತುದನ್ನು ಕಂಡು ಸುಲ್ತಾನರು

" ವಾಲಿ ಮುಹಮುದರೆಲ್ಲಿ ?" ಎಂದರು.

" ಅವರ ತೋಳಿಗೆ ಏಟು ಬಿದ್ದಿದೆ – ಮಲಗಿದ್ದಾರೆ ಜಹಾಪನಾ – ಬೆಳಿಗ್ಗೆ ಖಾವಂದಿರ ದರ್ಶನ ತೆಗೆದುಕೊಳ್ಳುವುದಾಗಿ ಅರಿಕೆ ಮಾಡಿಕೊಳ್ಳಲು ತಿಳಿಸಿದರು."

ಸುಲ್ತಾನರು ಕೆರಳಿ

" ಸುಲ್ತಾನರ ಹುಕುಂ ಆಗಿದೆ. ಈಗಲೇ ಬರಬೇಕೆಂದು ಹೇಳು." ಎಂದರು.

ನಾಲ್ಕಾರು ನಿಮಿಷಗಳಲ್ಲಿ ವಾಲಿ ಮುಹಮುದ್ ಎಡತೋಳನ್ನು ಕೈಯಲ್ಲಿ ಹಿಡಿದುಕೊಂಡು ಪ್ರವೇಶಿಸಿ ಸುಲ್ತಾನರಿಗೆ ಮುಜರೆಮಾಡಿ ನಿಂತರು.

ಸುಲ್ತಾನರು ಗಾಯಗೊಂಡಿದ್ದ ತೋಳು ಪರೀಕ್ಷಿಸಿ

" ಪೆಟ್ಟು ಬಲವಾಗಿಯೇ ಬಿದ್ದಿದೆ "

ಎಂದು ಸುರೈಯ್ಯನನ್ನು ಕೂಗಿ,

" ವಾಲೀಗೆ ಏಟು ಬಿದ್ದಿದೆ ಸುರೈಯ್ಯಾ " ಎಂದರು.

ಸುರೈಯ್ಯ ಒಳಗೆಹೋಗಿ ಶುಭ್ರವಸ್ತ್ರಗಳನ್ನು ತಂದಳು. ಅವಳನ್ನನು ಸರಿಸಿ ಬಂದ ಗುಲ್‌ಷನ್ ಬೋಗುಣಿಯಲ್ಲಿ ನೀರು ತಂದಳು.

ಸುಲ್ತಾನರು ವಾಲಿಯ ಕೈ ಹಿಡಿದು ಅವನನ್ನು ತಮ್ಮ ಪಲ್ಲಂಕದಮೇಲೆ ಕೂಡಿಸಿ, ಮೆಲ್ಲನೆ ಗಾಯಗೊಂಡಿದ್ದ ತೋಳಿನ ಬಟ್ಟೆಯನ್ನು ಹರಿದರು. ನೀರಿನಲ್ಲದ್ದಿದ ಬಟ್ಟೆಯಿಂದ ಸುರೈಯ್ಯ ಗಾಯಗಳನ್ನು ತೊಳೆಯಲೆತ್ನಿಸಲು ವಾಲಿ

" ಬಟ್ಟೆ ಕೊಡಿ ಬೇಗಂಸಾಹಿಬಾ, ನಾನೇ........"

" ಇರಲಿ – ಸುಮ್ಮನೆ ಕೂಡು ವಾಲಿ "

ಎಂದು ಸುಲ್ತಾನರು ಗದರಿದರು.

ಸುರೈಯ್ಯಾ, ಗುಲ್‌ಷನ್ ಗಾಯವನ್ನು ಚೆನ್ನಾಗಿ ತೊಳೆದು, ಅದಕ್ಕೆ ಯಾವದೊ ಔಷಧ ಲೇಪಿಸಿ, ಬಲವಾಗಿ ಬಟ್ಟೆ ಬಿಗಿದರು.

ಸುಲ್ತಾನರು ಪಕ್ಕದಲ್ಲಿದ್ದ ಹೂಜಿಯಲ್ಲಿದ್ದ ಮದ್ಯವನ್ನು ಎರಡು ಬಟ್ಟಲುಗಳಿಗೆ ಸುರುವಿ, ಒಂದನ್ನು ವಾಲಿ ಕೈಗಿತ್ತು

"ಸ್ವಲ್ಪ ತೆಗೆದುಕೋ – ನೋವು ಮರೆತು ಹೋಗುತ್ತದೆ"

ಎಂದರು. ವಾಲಿ, ಸುಲ್ತಾನರ ಪ್ರೀತ್ಯರ್ಥವಾಗಿ ಮದ್ಯ ಸೇವಿಸಿದ.

ಅವನ ಪಕ್ಕದಲ್ಲೇ ಕುಳಿತ ಸುಲ್ತಾನರು

"ನಿನ್ನೆ ನಾನು ಆಡಿದುದಕ್ಕೆ ಕೋಪ ಬಂತೇ ವಾಲಿ" ಎಂದರು.

"ಇಲ್ಲ ಜಹಾಪನಾ - ನೀವು ನಮ್ಮ ಮಾಬಾಪ್ – ನಮಗೆ ನೀವು ಬುದ್ಧಿ ಹೇಳದೆ ಇನ್ನು ಯಾರು ಹೇಳಬೇಕು."

"ಕುಲವಂತನನ್ನು ನೀನು ಮುಗಿಸದಿದ್ದರೆ ಈ ಯುದ್ಧದಲ್ಲಿ ಜಯ ಗಳಿಸುವುದು ನಮಗೆ ಕಷ್ಟಸಾಧ್ಯವಾಗಿತ್ತು."

"ಕುಲವಂತ ಮಹಾವೀರ ಜಹಾಪನಾ."

"ಸಂದೇಹವೇನು ?"

"ನಾನಿನ್ನು – ಹೆಚ್ಚು ಕಾಲ ಹೋರಾಡಲಾರೆ ಜಹಾಪನಾ – ಈ ಹತ್ಯಾ ಕಾಂಡ ನೋಡಲಾರೆ. – ಕುಲವಂತ ಕಣ್ಣು ಮುಚ್ಚುತ್ತಾ 'ಯುದ್ಧ, ಜಗಳ, ಅಶಾಂತಿ ಇಲ್ಲದ ಲೋಕದಲ್ಲಿ ನಾವಿಬ್ಬರೂ ಮತ್ತೆ ಭೆಟ್ಟಿಯಾಗುವ' ಎಂದು ಹೇಳಿದ – ಆ ದೃಶ್ಯ – ಆ ಮಹಾವೀರನ ಪ್ರಶಾಂತ ನೋಟ ನಾನು ಮರೆಯ ಲಾರೆ ಹುಜೂರ್...."

ಯೋಚನಾಮಗ್ನರಾದ ಸುಲ್ತಾನರು, ಗಡ್ಡ ತುರಿಸಿಕೊಳ್ಳುತ್ತಾ

"ನೀನು ಬಹಳ ದಣಿದಿದ್ದೀ – ಸ್ವಲ್ಪ ವಿಶ್ರಮಿಸಿಕೋ ವಾಲಿ. ಯುದ್ಧ ಮುಗಿದಂತಾಯಿತು. ನಾಳೆ ರಾಜಧಾನಿಗೆ ಪ್ರಯಾಣ ಮಾಡೋಣ" ಎಂದರು.

೨೦

ವಿಜಯಪತಾಕೆ ಮೆರಸುತ್ತ, ಸೈನ್ಯಸಮೇತನಾಗಿ ಹಿಂದಿರುಗಿದ ಸುಲ್ತಾನರನ್ನು ಕಲ್ಬುರ್ಗಿಯ ಜನ ಹಾರ್ದಿಕವಾಗಿ ಸ್ವಾಗತಿಸಿದರು. ನಾಗರಿಕರ ಉತ್ಸಾಹಕ್ಕೆ ಕೊನೆಮೊದಲಿರಲಿಲ್ಲ. ಮಸೀದಿಗಳಲ್ಲಿ ಪ್ರಾರ್ಥನೆ, ಬಡಬಗ್ಗರಿಗೆ ಅನ್ನದಾನ ಏರ್ಪಟ್ಟಿತ್ತು. ಯುದ್ಧದಲ್ಲಿ ಭಾಗವಹಿಸಿದ್ದ ಸೈನಿಕರಿಗೆಲ್ಲಾ ಉಚಿತ ಪಾರಿತೋಷಕಗಳು ಕೊಡಲ್ಪಟ್ಟವು.

ಒಂದು ವಾರ ರಾಜಧಾನಿಯಲ್ಲಿ ಉತ್ಸವಗಳ ಮೇಲೆ ಉತ್ಸವ ; ಸಮಾರಂಭಗಳ ಮೇಲೆ ಸಮಾರಂಭ !

ಕೊನೆಯ ದಿನ ಸುಲ್ತಾನರ ಉಪವನದಲ್ಲಿ ರಾಜಧಾನಿಯ ಎಲ್ಲ ಗಣ್ಯ ವ್ಯಕ್ತಿಗಳು, ಸರದಾರರು, ಶ್ರೀಮಂತರು, ಸೈನ್ಯಾಧಿಕಾರಿಗಳಿಗೂ ಭಾರಿ 'ದಾವತ್' ವ್ಯವಸ್ಥೆ ಮಾಡಲ್ಪಟ್ಟಿತ್ತು.

ಸುಲ್ತಾನರ – ಮನೆತನದ ಪೇಷ್ವಾ ಮಲ್ಲಿಕ್ ಸೈಫುದ್ದೀನ್ ಘೋರಿ ಉಪವನವನ್ನು ನಂದನವನವನ್ನಾಗಿ ಮಾರ್ಪಡಿಸಿದ್ದ. ಗಿಡಮರಗಳ ಎಲೆಗಳು ಕಾಣದಷ್ಟು ದೀಪಗಳು ಬೆಳಗಿದವು.

ಅತಿಥಿಗಳಿಗೆ ಕಟ್ಟರೆಯಾಗುವಷ್ಟು ಬಗೆಬಗೆಯ ಮಾಂಸಾಹಾರ, ಷಿರಾಜಿನ ಮದ್ಯ ವ್ಯವಸ್ಥಿತವಾಗಿತ್ತು.

ಗುಂಪುಗುಂಪಾಗಿ ಸೇರಿದ್ದ ಅತಿಥಿಗಳು ತಮಗೆ ಮನಬಂದ ರೀತಿಯಲ್ಲಿ ವಿಹರಿಸುತ್ತಿದ್ದರು. ಸೈಫುದ್ದೀನ್ ಮುನ್ನೂರು ಮಂದಿ ಗಾಯಕರು, ನಟರು, ನರ್ತಕಿಯರು, ಯಕ್ಷಿಣಿ ಪ್ರದರ್ಶನಕಾರರನ್ನು ಕಲೆಹಾಕಿದ್ದ. ಒಂದೊಂದು ಗುಂಪನ್ನು ಕೆಲಕೆಲವು ಗಾಯನ ನರ್ತನ ಪ್ರವೀಣ ಪ್ರವೀಣೆಯರು ರಂಜಿಸುತ್ತಿದ್ದರು.

ಸುಲ್ತಾನರು ಎಲ್ಲರನ್ನೂ ಸೌಜನ್ಯದಿಂದ ಮಾತನಾಡಿಸುತ್ತ, ಎಲ್ಲ ಗುಂಪಿನವರೊಂದಿಗೂ ಸ್ವಲ್ಪ ಸ್ವಲ್ಪ ಮದ್ಯ ಸೇವಿಸುತ್ತ ಓಡಿಯಾಡುತ್ತಿದ್ದರು.

ಮಧ್ಯರಾತ್ರಿ ಕಳೆದಮೇಲೆ ದಾವತ್‌ಗೆ ಪುಟಗೊಟ್ಟಂತಾಯಿತು

ತಡೆಯಿಡೆಯಿಲ್ಲದೆ ಅತಿಥಿಗಳ ಸ್ವೇಚ್ಛಾವಿಹಾರ ಸಾಗಿತು.

ಅರಮನೆಯ ಉಪವನದಲ್ಲಿ ನಡೆಯುತ್ತಿದ್ದ ಹೇಯಕೃತ್ಯಗಳನ್ನು ನೋಡಲಾಗದೆ ವಾಲಿ ಮುಹಮದ್ ಮೆಲ್ಲನೆ ನುಸುಳಿಕೊಂಡು, ಮನೆ ಸೇರಿ ಬಿಟ್ಟ.

ಕಂಠಪೂರ್ತಿ ಕುಡಿದಿದ್ದ ಸುಲ್ತಾನರು ನರ್ತಕಿಯೊಬ್ಬಳನ್ನು ಬರಸೆಳೆದು ಕೊಂಡು, ಅವಳೊಂದಿಗೆ ಕುಣಿಯಲಾರಂಭಿಸಿದರು, ವಾಹಿದ್ ಖಾನ್ ಸುಲ್ತಾನರ ಕುಣಿತಕ್ಕೆ ತಾಳ ಬಡಿಯುತ್ತ 'ವಹವಾ' ಎನ್ನುತ್ತಿದ್ದ. ಅಮಲಿನಲ್ಲಿದ್ದ ಅತಿಥಿಗಳು ಮೇಳದವರೊಂದಿಗೆ ತಾವೂ ಹಾಡಲಾರಂಭಿಸಿದರು.

ದಾವತ್ ಮುಗಿಯುವ ವೇಳೆಗೆ ಬೆಳಿಗ್ಗೆ ಸಮಿಾಪಿಸಿತ್ತು. ಅತಿಥಿಗಳು ತೂರಾಡಿಕೊಂಡು ಗೃಹಾಭಿಮುಖರಾದರು. ಗಂಟುಮೂಟೆ ಕಟ್ಟಿ ಹೊರಡಲನುವಾಗಿದ್ದ ಗಾಯಕ, ನರ್ತಕ ನರ್ತಕಿಯರ ಸಂಭಾವನೆ ವಿಷಯ ಸೈಫುದ್ದೀನ್ ಪ್ರಸ್ತಾಪಿಸಲು ಸುಲ್ತಾನರು ನಗುನಗುತ್ತ

"ಎಲ್ಲರಿಗೂ ಒಂದೊಂದು ಸಾವಿರ ಚಿನ್ನದ ಮೊಹರು ಕೊಡುವಂತೆ ವಿಜಯನಗರಕ್ಕೆ ಹುಂಡಿ ಬರೆದು ಕಳುಹಿಸು ಸೈಫುದ್ದೀನ್"

ಎಂದು ಹುಕುಂ ದಯಪಾಲಿಸಿದರು.

ಸೈಫುದ್ದೀನ್ ಹುಂಡಿಯನ್ನೇನೋ ಬರೆದ. ಆದರೆ ಅದನ್ನು ಕುಶೀಲರ ನಾಯಕನ ಕೈಗಿತ್ತು ವಿಜಯನಗರಕ್ಕೆ ಕಳಿಸಿಕೊಡಲಿಲ್ಲ.

ಬೆಳಗಾಯಿತು.

ಮದ್ಯದ ಅಮಲು ಕೆಳಗಿಳಿಯಲು ಸುಲ್ತಾನರು ಸೈಫುದ್ದೀನನ್ನು ಕರೆಸಿ

"ರಾತ್ರಿ ಬರೆಸಿದ ಹುಂಡಿ ಕಳಿಸಿದೆಯಾ ಸೈಫುದ್ದೀನ್" ಎಂದು ಕೇಳಿದರು.

"ಕಳಿಸಲಿಲ್ಲ ಜಹಾಪನಾ."

"ಏಕೆ ?"

"ರಾತ್ರಿ – ತಾವು...."

"ಕುಡಿದ ಅಮಲಿನಲ್ಲಿ ಹುಂಡಿ ಬರೆಸಿದೆ ಎಂದು ಭಾವಿಸಿದೆಯಾ ? ಕತ್ತೆಯಮಗನೇ, ನಾವೆಷ್ಟು ಕುಡಿದಿದ್ದರೂ, ಬುದ್ಧಿ ನಮ್ಮ ಕೈಯಲ್ಲಿರುತ್ತದೆ. ಹುಂಡಿಯೆಲ್ಲಿ ?"

ಹುಂಡಿಯನ್ನು ಸೈಫುದ್ದೀನ್ ಸುಲ್ತಾನರ ಕೈಯಲ್ಲಿಡಲು ಅವರು ಅದಕ್ಕೆ ತಮ್ಮ ಮುದ್ರೆಯುಂಗುರದಿಂದ ಮುದ್ರೆಯೊತ್ತಿ

" ಕುಶೀಲರ ತಂಡದ ನಾಯಕ ಯಾರು ?"

" ಮುಖ್ತಿಯಾರ್."

" ಅವನ ಕೈಗೆ ಕೊಟ್ಟು ಇಂದೇ ವಿಜಯನಗರಕ್ಕೆ ಹೋಗಲು ತಿಳಿಸು. ಅವನ ಪ್ರಯಾಣದ ವೆಚ್ಚಕ್ಕೆ ಏನು ಬೇಕೋ ಕೊಡು " ಎಂದರು.

ನಿರ್ವಾಹವಿಲ್ಲದೆ ಸೈಫುದ್ದೀನ್ ಸುಲ್ತಾನರ ಹುಕುಮಿನಂತೆ ನಡೆದುಕೊಳ್ಳಬೇಕಾಯಿತು.

ಸುಲ್ತಾನರಿಂದ ಬಂದ ಪತ್ರ ಪರಾಮರ್ಶಿಸಲು ವಿಜಯನಗರದ ರಾಜಧಾನಿಯಲ್ಲಿ ದೊರೆಗಳ ಸಮ್ಮುಖದಲ್ಲಿ ಮಂತ್ರಾಲೋಚನ ಸಭೆ ಸೇರಿತು

ಮುದ್ದಪ್ಪನಾಯಕರು ಓದಿದ ಪತ್ರ ಕೇಳಿ ಸಭಿಕರು ಕಿಡಿಕಿಡಿಯಾದರು.

ಸ್ವಭಾವತಃ ಶಾಂತಮೂರ್ತಿಗಳಾದ ಬುಕ್ಕರಾಯರು ಮುಖ ಕೆಂಪಗೆ ಮಾಡಿಕೊಂಡು

" ಏನಿದು ! ಬಹಮನಿ ಸುಲ್ತಾನರ ಪತ್ರವೇ ?" ಎಂದರು.

" ಹೌದು ಮಹಾಸ್ವಾಮಿ. ಸುಲ್ತಾನರ ಖಾಸಾಮುದ್ರೆ ಬಿದ್ದಿದೆ."

" ಸುಲ್ತಾನರಿಗೆ ಬುದ್ಧಿ ನೆಟ್ಟಗಿರುವಂತಿಲ್ಲ. ವಿಜಯನಗರದರಸರು ತಮ್ಮ ಸಾಮಂತರೆಂದು ಭಾವಿಸಿರುವಂತಿದೆ."

" ನಮಗೆ ಅಪಮಾನವಾಗಲೆಂದೇ ಕುಶೀಲರನ್ನು ಇಲ್ಲಿಯವರೆಗೆ ಕಳಿಸಿಕೊಟ್ಟಿದ್ದಾರೆ ಮಹಾಸ್ವಾಮಿ. ಸುಲ್ತಾನರ ಔದ್ಧತ್ಯ ನಾವು ಸಾಕಷು ಸಹಿಸಿದ್ದೇವೆ – ಇನ್ನು ಸುಮ್ಮನಿರುವುದು ನಮ್ಮ ಗೌರವಕ್ಕೆ ತಕ್ಕುದಲ್ಲ."

ಎಂದು ದಣ್ಣಾಯಕ ಮಲ್ಲಿನಾಥರು ನುಡಿದರು.

" ಈ ಸಾರೆ ನಿಮ್ಮ ಅಭಿಪ್ರಾಯವನ್ನು ಪೂರ್ಣವಾಗಿ ಅನುಮೋದಿಸುತ್ತೇನೆ ಮಲ್ಲಿನಾಥರೇ. ಸುಲ್ತಾನರ ಪತ್ರ ತಂದಿರುವವನನ್ನು ಏನು ಮಾಡಬೇಕು ಹೇಳಿ."

" ಗಲ್ಲಿಗೇರಿಸಬೇಕು."

" ದೂತನನ್ನು ಗಲ್ಲಿಗೇರಿಸುವುದು ರಾಜಧರ್ಮಕ್ಕೆ ವಿರುದ್ಧವಾದುದು. ಅವನನ್ನು ಚೆನ್ನಾಗಿ ಅಪಮಾನಗೊಳಿಸಿ ಸುಲ್ತಾನರಲ್ಲಿಗೆ ಕಳಿಸಿಕೊಡಿ."

" ಸುಲ್ತಾನರ ಅಕ್ಷಮ್ಯ ಅಪರಾಧಕ್ಕೂ ಶಿಕ್ಷೆಯಾಗಬೇಕು ಮಹಾಪ್ರಭೂ."

ಎಂದು ಮಾರಪ್ಪನಾಯಕರು ಅರಿಕೆಮಾಡಿಕೊಂಡರು.

ಗಂಭೀರವದನರಾದ ಮಹಾರಾಜರು ಯೋಚಿಸುತ್ತ

"ಯುದ್ಧ ಅನಿವಾರ್ಯವಾಯಿತು. ಆಗಲಿ – ಶ್ರೀಭುವನೇಶ್ವರಿಯ ಇಚ್ಛೆ! ಸೈನ್ಯಕ್ಕೆ ಸೂಚನೆಕೊಡಿ – ಶನಿವಾರ ಸೂರ್ಯೋದಯಾನಂತರ ನಮ್ಮ ಸೈನ್ಯ ಆದವಾನಿಯತ್ತ ಸಾಗಲಿ. ವಿಜಯನಗರ ಬಹಮನಿ ಎರಡೂ ದಕ್ಷಿಣದ ಸ್ವಾಮ್ಯ ವಹಿಸಲು ಸಾಧ್ಯವಿಲ್ಲ. ನಮ್ಮ ಬಲಾಬಲಗಳ ಪರೀಕ್ಷೆಯೊಮ್ಮೆ ನಡೆದುಹೋಗಲಿ"

ಎಂದು ಮೇಲಕ್ಕೆದ್ದರು.

ಮಾರಪ್ಪನಾಯಕರು, ಮುಖ್ತ್ಯಾರನನ್ನು ಎಳೆದೊಯ್ದು, ಕತ್ತೆಯ ಮೇಲೆ ಕೂಡಿಸಿ, ಊರಿನ ಎಲ್ಲ ಪ್ರಧಾನ ಬೀದಿಗಳಲ್ಲಿಯೂ ಮೆರವಣಿಗೆ ಮಾಡಿಸಿ, ಅವನನ್ನು ಹೊಡೆದಟ್ಟಿದರು.

## ೨೧

ಶನಿವಾರ ಬೆಳಿಗ್ಗೆ ವಿಜಯನಗರ ಬಿಟ್ಟು ತೆರಳಿದ ಬುಕ್ಕರಾಯರು ಆದವಾನಿಯ ಕೋಟೆಯ ಬಳಿ ಪಾಳೆಯ ಹೂಡಿದರು. ದಣ್ಣಾಯಕ ಮಲ್ಲಿನಾಥ, ಮಾರಪ್ಪನಾಯಕ, ಮುದ್ದಪ್ಪನಾಯಕ, ಯುವರಾಜ ಹರಿಹರ, ವಿಜಯನಗರದ ಬೃಹದ್ – ಸೈನ್ಯದ ವಿವಿಧ ಭಾಗಗಳ ಯಾಜಮಾನ್ಯ ವಹಿಸಿದ್ದರು. ಒಂದು ಲಕ್ಷ ಪದಾತಿಗಳು, ಮೂವತ್ತು ಸಾವಿರ ಅಶ್ವಗಳು, ಮೂರು ಸಾವಿರ ಗಜಬಲ ಪಡೆದಿದ್ದ ವಿಜಯನಗರ ಸೈನ್ಯದ ಬೀಡು ಒಂದು ಮಹಾನಗರವಾಗಿ ಮಾರ್ಪಟ್ಟಿತು..

ರಾಯರು ಸೈನ್ಯದ ತುಕಡಿಗಳನ್ನು ವಿಂಗಡಿಸಿ ಬಹುಮನಿರಾಜ್ಯದ ವಿವಿಧ ಭಾಗಗಳ ಮೇಲೆ ಧಾಳಿ ಮಾಡಲು ಕಳಿಸಿಕೊಟ್ಟರು.

ಗಜಬೇಂಟೆಕಾರ ಓಬಲನಾಯಕನ ನೇತೃತ್ವದಲ್ಲಿ ಹೊರಟ ಸೈನ್ಯದ ತುಕಡಿ ಮುದಕಲ್ ಕೋಟೆಯನ್ನು ಆಕ್ರಮಿಸಿಕೊಂಡಿತು. ಸುಲ್ತಾನನ ಸೈನ್ಯಕ್ಕೂ ಓಬಲನಾಯಕನ ತುಕಡಿಗೂ ಘೋರ ಯುದ್ಧ ನಡೆದು, ಸುಲ್ತಾನರ ಸೈನಿಕರು ಹೇಳ ಹೆಸರಿಲ್ಲವಾದರು.

ಈ ಸುದ್ದಿಯನ್ನೊಯ್ದು ಸುಲ್ತಾನರಿಗೆ ಮುಟ್ಟಿಸಿದ ಸೇನಾನಿ ಫರೀದನನ್ನು ಸುಲ್ತಾನರು ಶೂಲಕ್ಕೆ ಏರಿಸಿದರು.

ಮುದಕಲ್ಲು ಪತನದಿಂದ ಚಿತ್ತಸ್ವಾಸ್ಥ್ಯವನ್ನೇ ನೀಗಿಕೊಂಡ ಸುಲ್ತಾನರು, ದೊಡ್ಡ ಮಸೀದಿಗೆ ಹೋಗಿ ಕತ್ತಿ ಹಿರಿದು

"ಮುದಕಲ್ಲಿನಲ್ಲಿ ಮಡಿದ ಪ್ರತಿಯೊಬ್ಬ ಧರ್ಮಬಂಧುವಿನ ಪರವಾಗಿ ನಾನು ಸೇಡು ತೆಗೆದುಕೊಳ್ಳುತ್ತೇನೆಂದು ಪ್ರಮಾಣ ಮಾಡುತ್ತೇನೆ. ಒಂದು ಲಕ್ಷ ಕಾಫಿರರನ್ನು ಸಂಹಾರಮಾಡಿದಲ್ಲದೆ ಈ ನನ್ನ ಕತ್ತಿಯನ್ನು ಒರೆ ಸೇರಿಸುವುದಿಲ್ಲ."

ಎಂದು ಶಪಥಮಾಡಿ ಷಹಜಾದಾ ಮುಜಾಹಿದ್‌ಷಹನನ್ನು ಗಾದಿಯ ಮೇಲೆ ಕೂಡಿಸಿ, ಸೈಫುದ್ದೀನ್ ಘೋರಿಯನ್ನು ಅವನ ರಕ್ಷಕನನ್ನಾಗಿ ನಿಯಮಿಸಿ, ಸೈನ್ಯಸಮೇತರಾಗಿ ಕೃಷ್ಣಾನದಿಯ ದಂಡೆಗೆ ಬಂದು ಬೀಡು ಬಿಟ್ಟರು.

ಮಾರನೆಯ ಬೆಳಿಗ್ಗೆಯೇ ಒಂಭತ್ತುಸಾವಿರ ಅಶ್ವಾರೋಹಿಗಳೊಂದಿಗೆ ಕೃಷ್ಣಾನದಿಯನ್ನು ದಾಟಿದ ಸುಲ್ತಾನರು, ಪ್ರತಿಭಟಿಸಿದ ಬುಕ್ಕರಾಯರ ಸೈನ್ಯದ ತುಕಡಿಯನ್ನು ನಿಪಾತಗೊಳಿಸಿ ಪ್ರತಿಯೊಬ್ಬ ಸೈನಿಕನನ್ನೂ ನಿರ್ದಾಕ್ಷಿಣ್ಯವಾಗಿ ತಮ್ಮ ಕತ್ತಿಗೆ ಆಹುತಿ ಒಪ್ಪಿಸಿದರು.

ಪ್ರಥಮ ವಿಜಯದಿಂದ ಮದವೇರಿದ ಸುಲ್ತಾನರು ಸೈನ್ಯಗಳನ್ನು ಸಾಗಿಸಿಕೊಂಡು, ದಾರಿಯುದ್ದಕ್ಕೂ ಸಿಕ್ಕಿದ ಪ್ರತಿಯೊಬ್ಬರನ್ನೂ ಸಂಹರಿಸುತ್ತ ಕೌತಾಳದವರೆಗೆ ಬಂದುಬಿಟ್ಟರು.

ವಾಲಿ ಮಹಮುದರ ನೇತೃತ್ವದಲ್ಲಿ ಸೈನ್ಯದ ತುಕಡಿಯೂ ಶತ್ರುಸೈನ್ಯವನ್ನು ಅಪಾರವಾಗಿ ಘಾತಿಸಿತು.

ಸುಲ್ತಾನರು ಸೈನ್ಯಸಮೇತರಾಗಿ ರಾಜಧಾನಿಯ ಕಡೆ ನುಗ್ಗುತ್ತಿದ್ದಾರೆಂದು ಬುಕ್ಕರಾಯರಿಗೆ ಸುದ್ದಿ ಬರಲು, ಅವರು ತಕ್ಷಣ ಆದವಾನಿ ಕೋಟೆಯ ರಕ್ಷಣೆಗೆ ಸಾಕಾಗುವಷ್ಟು ಸೈನ್ಯ ಬಿಟ್ಟು ಉಳಿದ ಸೈನ್ಯದೊಂದಿಗೆ ರಾಜಧಾನಿಯ ರಕ್ಷಣೆಗೆ ಧಾವಿಸಿದರು.

ಸುಲ್ತಾನರ ಸೈನ್ಯ ವಿಜಯನಗರವನ್ನು ಸುತ್ತುಗಟ್ಟಿತು.

ಒಂದು ತಿಂಗಳು ಹೆಣಗಾಡಿದರೂ ಸುಲ್ತಾನರ ಸೈನ್ಯ ವಿಜಯನಗರ ಪ್ರವೇಶಿಸಲಾಗಲಿಲ್ಲ.

ಸುಲ್ತಾನರು ಒಂದು ಹಂಚಿಕೆ ಹೂಡಿ, ತಮ್ಮ ರಾಜಧಾನಿಗೆ ಮರಳಲು

ಸೈನ್ಯಕ್ಕೆ ಆಜ್ಞೆ ವಿಧಿಸಿದರು.

ಸುಲ್ತಾನರ ಸೈನ್ಯ ಕಾಲ್ತೆಗೆಯುತ್ತಿದ್ದುದನ್ನು ಕಂಡ ವಿಜಯನಗರದವರು ಸುಪ್ರೀತರಾದರು.

ವಿಜಯನಗರದ ಪಾಳೆಯದಲ್ಲಿ ರಾತ್ರಿ ಹಬ್ಬ ಏರ್ಪಾಟಾಯಿತು. ಎಲ್ಲರೂ ತಿಂದು, ಉಂಡು ಮೈಮರೆತಿದ್ದ ವೇಳೆಯಲ್ಲಿ ಸುಲ್ತಾನರ ದಂಡು ಅವರ ಮೇಲೆ ಬಿದ್ದಿತು. ಆ ಇರುಳಿನ ಕಾಳಗದಲ್ಲಿ ಸತ್ತವರ ಸಂಖ್ಯೆಯೇ ಗೊತ್ತಿಲ್ಲ. ಹೊರವಲಯದಲ್ಲಿ ನಡೆದಿದ್ದ ಹತ್ಯಾಕಾಂಡದ ಸುದ್ದಿ ರಾಜಧಾನಿ ಮುಟ್ಟಲು ಅಲ್ಲಿಂದ ದಂಡು ಸಹಾಯಕ್ಕೆ ಬಂದೊದಗಿತು.

ಬೆಳಗಾಗುವಲ್ಲಿ ರಣಭೂಮಿಯು ತುಂಬ ಹೆಣಗಳು ತುಂಬಿದ್ದವು.

ಸುಲ್ತಾನರಿಗೆ ಬಲವಾದ ಪೆಟ್ಟು ಬಿದ್ದಿತ್ತು.

ಆ ಸುದ್ದಿಯನ್ನು ಹೊರಗೆಡವದೆ ವಾಲಿ ಮುಹಮುದ್ ಸುಲ್ತಾನರನ್ನೂ ಅವರ ಪರಿವಾರವನ್ನೂ ಸಾಗಿಸಿಕೊಂಡು ಕಲ್ಬುರ್ಗಿ ಸೇರಿದ

ದಿಕ್ಕಾಪಾಲಾಗಿ ಚೆದುರಿಹೋಗಿದ್ದ ಸುಲ್ತಾನರ ಸೈನಿಕರು ಒಬ್ಬೊಬ್ಬರಾಗಿ ರಾಜಧಾನಿ ಸೇರಿಕೊಂಡರು.

ಸಹಸ್ರಾರು ಹಿಂದುಗಳನ್ನು ಬಲಿ ತೆಗೆದುಕೊಂಡಿದ್ದರೂ ಸುಲ್ತಾನರಿಗೆ ಪೂರ್ಣ ಸೋಲಾಗಿತ್ತು. ಅವರ ಸೈನ್ಯ ತುಮುರುತುಮುರಾಗಿ ಒಡೆದು ಹೋಗಿತ್ತು.

ಗಾಯಗೊಂಡಿದ್ದ ಸುಲ್ತಾನರು ಮನೋರೋಗಗ್ರಸ್ತರಾಗಿ ಹಾಸಿಗೆ ಹಿಡಿದು ಮಲಗಿಬಿಟ್ಟರು.

ಸುಲ್ತಾನರು ಪ್ರಬಲರಾಗಿದ್ದಾಗ ಅವರ ಮರ್ಜಿ ಅನುಸರಿಸಿಕೊಂಡು, ಮುಖ ಸ್ತುತಿಮಾಡಿಕೊಂಡು ಬಾಳುತ್ತಿದ್ದವರೆಲ್ಲರೂ ಅವರ ಕೈಬಿಟ್ಟದ್ದರು. ವಾಹಿದ್, ಸೈಫುದ್ದೀನರು ಕೂಡ ಹೊಸ ಸುಲ್ತಾನರ ಪರಿವಾರ ಸೇರಿ ಮುಹಮುದ್ ಷಹಾರವರನ್ನು ಕಡೆಗಾಣಿಸಿಬಿಟ್ಟರು.

ಸುಲ್ತಾನರ ವೈಭವ ಒಂದೇ ದಿನದಲ್ಲಿ ಕುಸಿದುಬಿದ್ದಿತ್ತು.

ಅವರ ಬಳಿಯಲ್ಲಿ ಸುರೈಯ್ಯಾ, ಗುಲ್ ಮತ್ತು ವಾಲಿ ಮುಹಮುದರಲ್ಲದೆ ಬೇರೆಯಾರೂ ಇಲ್ಲ.

ಸುಲ್ತಾನರು ಸುತ್ತ ನೋಡಿ,

“ ನಾಯಿಗಳೇನಾದವು ಸುರೈಯ್ಯಾ ”

ಎಂದು ಕೇಳಿದರು.

ಸುರೈಯ್ಯಾ ಕಿಟಕಿಕಡೆ ನೋಡುತ್ತ

" ಎಂಜಲು ಹುಡುಕಿಕೊಂಡು ಹೋಗಿವೆ ಜಹಾಪನಾ "

ಎಂದು ಹೇಳಿದಳು.

ಷಹಜಾದಾ ಮುಜಾಹಿದ್ ಎರಡು ಮೂರು ದಿನಗಳಿಗೊಮ್ಮೆ ಬಂದು ತಂದೆಯನ್ನು ಕಾಣುತ್ತಿದ್ದ. ಕೇವಲ ವ್ಯವಹಾರಿಕವಾಗಿ

" ಇವತ್ತು ಹೇಗಿದೆ ಹುಜೂರ್ " ಎಂದು ಕೇಳುವನು.

" ಸ್ವಲ್ಪ ಉತ್ತಮ."

" ಏನಾದರೂ ಬೇಕಾಗಿತ್ತೇ ?"

" ಏನೂ ಬೇಡ ಮುಜಾಹಿದ್."

" ಸರಿ "

ಎಂದವನೇ ಷಹಜಾದಾ, ಸುಲ್ತಾನರನ್ನು ಬಿಟ್ಟು ಹೋಗುತ್ತಿದ್ದ.

ಒಳಗೆ ತುಂಬಿದ್ದ ದುಃಖ ಸಹಿಸಲಾಗದೆ ಒಂದು ದಿನ ಸುಲ್ತಾನರು

" ಪಾಪಿ ಮುಜಾಹಿದನನ್ನು ನಾನೇಕೆ ಗಾದಿಯಮೇಲೆ, ಕೂಡಿಸಿದೆ ವಾಲಿ." ಎಂದರು.

" ತಾವು ಹಾಗನ್ನಬಾರದು ಹುಜೂರ್. ಷಹಜಾದಾ ತಮ್ಮ ಮಕ್ಕಳು- ತಮ್ಮ ಉತ್ತರಾಧಿಕಾರಿಗಳಾದ ಅವರಿಗೇ ಗಾದಿ ಸಲ್ಲುವುದು ವಿಹಿತವಾಗಿದೆ."

" ಈ ದುರ್ಬಲ ನನ್ನ ಕೆಲಸ - ಹೆಸರು ಎಲ್ಲವನ್ನೂ ಮಣ್ಣುಗೂಡಿಸಿ ಬಿಡುತ್ತಾನೆ ವಾಲಿ. ಮುಜಾಹಿದ್ ಮಹಾಕಪಟಿ - ಅವನನ್ನು ನಂಬಬೇಡ."

ಎಂದು ಹೇಳಿದರು.

ಸುಲ್ತಾನರ ಮನೋರೋಗ ವಿಕೃತರೂಪ ತಳೆಯಲಾರಂಭಿಸಿತು. ಓರುಗಲ್ಲು, ಆದವಾನಿ ಕದನಗಳಲ್ಲಿ ತಾವೂ, ತಮ್ಮ ಸೈನಿಕರೂ ನಡೆಸಿದ್ದ ಅನಂತ ಅತ್ಯಾಚಾರಗಳ ರುದ್ರ ಚಿತ್ರಗಳು ಸುಲ್ತಾನರ ಚಿತ್ತಫಲಕದ ಮೇಲೆ ಮೂಡಿ ಅವರ ಮನಃಶಾಂತಿಯನ್ನು ಕದಡಿಬಿಟ್ಟಿದ್ದವು.

'ಗರ್ಭಿಣಿಸ್ತ್ರೀ - ಗರ್ಭಿಣಿ ಸ್ತ್ರೀಯನ್ನು ಸೈನಿಕರು ಕೊಲ್ಲುತ್ತಿದ್ದಾರೆ.

ಮಕ್ಕಳು ಹಾಲು ಕಂದಗಳನ್ನು ಸೈನಿಕರು ಹಿಡಿದು ಅಪ್ಪಳಿಸುತ್ತಿದ್ದಾರೆ.'

ಎಂದು ಚೀರುತ್ತಿದ್ದರು.

ಮುಜಾಹಿದನ ನೆನವು ಬಂದರೆ ಸಾಕು - ಸುಲ್ತಾನರ ಮನಸ್ಸು ಅಲ್ಲ ಕಲ್ಲೋಲವಾಗುತ್ತಿತ್ತು,

' ಮುಜಾಹಿದ್ - ಮುಜಾಹಿದ್ ನನ್ನ ಮಗನಲ್ಲ - ಅವನು ನನ್ನ

ಬಂಗಾರದವಳ ಮಗ – ಅದಕ್ಕೇ ಅವನು ರಣಹೇಡಿ – ದುರ್ಬಲ – ಪಿತೃಪೀಡಕ.'

ಸುರೈಯ್ಯ ಮೃದುವಾಗಿ ಸುಲ್ತಾನರ ಬಾಯಿಮುಚ್ಚಿ

"ಹೋಗಲಿ ಬಿಡಿ – ಅವರಿಂದ ನಿಮಗೆ ಆಗಬೇಕಾದುದೇನಿದೆ?"

ಎಂದು ಸಮಾಧಾನಗೊಳಿಸುತ್ತಿದ್ದಳು.

ಸುಲ್ತಾನರು ಶಾಂತಚಿತ್ತರಾಗಿದ್ದಾಗ

"ಸೂರ್, ಈ ಜಗತ್ತಿನ ಗೊಡವೆಯೇ ಬೇಡ. ಇಲ್ಲಿ ಬರೀ ನೀಚತನ, ದುರಾಶೆ ತುಂಬಿದೆ. ಈ ಬಾರಿ ನಾನು ಹಾಸಿಗೆ ಬಿಟ್ಟೆದ್ದ ಕೂಡಲೇ ನೀನು ನಾನು, ಗುಲ್ ಮತ್ತು ವಾಲಿ ಹಜ್‌ಗೆ ಹೊರಟುಹೋಗೋಣ. ನಮ್ಮ ಕೊನೆಗಾಲವನ್ನು ಅಲ್ಲೇ ಭಗವದ್ಸಾನ್ನಿಧ್ಯದಲ್ಲಿ ಕಳೆಯೋಣ."

ಸುಲ್ತಾನರು ಹೇಳಿದುದಕ್ಕೆಲ್ಲಾ ಸುರೈಯ್ಯಾ ಹೂಗುಟ್ಟುತ್ತಿದ್ದಳು.

ಹುಣ್ಣಿಮೆಯ ಹಿಂದಿನ ರಾತ್ರಿ – ಸುಲ್ತಾನರ ಬೇನೆ ಉಲ್ಬಣಾವಸ್ಥೆಗೇರಿತು. ಸುಲ್ತಾನರು ಎದ್ದು ಹೊರಗೆ ಓಡಿಹೋಗಲು ಯತ್ನಿಸುತ್ತಿದ್ದರು. ಸರದಿಯಮೇಲೆ ಗುಲ್, ಸುರೈಯ್ಯ, ವಾಲಿ ಸುಲ್ತಾನರನ್ನು ಕಾಯುತ್ತ ಕುಳಿತರು.

ಬೆಳಗಾಗುವಲ್ಲಿ ಸುಲ್ತಾನರ ಪ್ರಾಣೋತ್ಕ್ರಮಣವಾಗಿತ್ತು. ಅವರ ಮೂಗು ಬಾಯಿಗಳಿಂದ ರಕ್ತ ದ್ರವಿಸಿತ್ತು. ದುಃಖತಪ್ತರಾದ ಸುರೈಯ್ಯ, ಗುಲ್ ಇಬ್ಬರನ್ನೂ ವಾಲಿಯೇ ಸಮಾಧಾನಗೊಳಿಸಬೇಕಾಯಿತು.

ಬಾವುಟದ ಬತೇರಿಯ ಮೇಲೆ ಕಲ್ಬುರ್ಗಿಯ ಬಾವುಟ ಅರ್ಧಕಂಬದಲ್ಲಿ ಹಾರಾಡಿತು.

ಗತಿಸಿದ ಸುಲ್ತಾನರ ಅಂತಿಮದರ್ಶನಕ್ಕಾಗಿ ಜನ ಅರಮನೆಯ ಮುಂದಣ ಬಯಲಿನಲ್ಲಿ ಸೇರಿದರು.

ಸುಲ್ತಾನರ ಪಾರ್ಥಿವ ಶರೀರಕ್ಕೆ ಸ್ನಾನ ಮಾಡಿಸಿ, ಸುಗಂಧ ದ್ರವ್ಯ ಲೇಪಿಸಿ, ಅದನ್ನೊಂದು ಬೆಳ್ಳಿಯ ತಗಡಿನ ಪೆಟ್ಟಿಗೆಯಲ್ಲಿಟ್ಟು, ದರ್ಬಾರ್ ಮಹಲಿನಲ್ಲಿ ಇಟ್ಟರು. ಜನ ಮೌನವಾಗಿ ಬಂದು ತಮ್ಮ ಪ್ರಣಾಮ ಸಲ್ಲಿಸಿ ಹೋದರು.

ಹಸನ್ ಮನೆತನದವರ ಸಮಾಧಿಗಳಿದ್ದ ದೊಡ್ಡ ಮಸೀದಿಯಲ್ಲೇ ಸುಲ್ತಾನ್ ಮಹಮುದ್‌ಷಹರ ಅವಶೇಷವೂ ಮಣ್ಣು ಮಾಡಲ್ಪಟ್ಟಿತು.

ಅದೇ ಸಂಜೆ ಮುಜಾಹಿದ್ ಸುಲ್ತಾನನೆಂದು ಅರಮನೆಯ ಡಂಗುರ ಸಾರಿತು.

ಮುಜಾಹಿದ್ ಪಟ್ಟವೇರಿ ಒಂದೇ ವಾರ ಕಳೆದಿರಲಿಲ್ಲ. ಮಹತ್ತರ ಸುಧಾರಣೆಗಳನ್ನು ಮಾಡಲಾರಂಭಿಸಿದ. ದೊಡ್ಡ ಸುಲ್ತಾನರ ನಂಬಿಕೆಗೆ ಪಾತ್ರರಾಗಿದ್ದ ದಿಲಾವರ್ ಖಾನ್, ಸಿಕಂದರ್ ಖಾನ್, ಶಂಷುದ್ದೀನರಿಗೆ ವಿರಾಮ ವೇತನವಿತ್ತು ಮನೆಗೆ ಕಳುಹಿಸಿ ಅವರ ಸ್ಥಾನಗಳಲ್ಲಿ ವಾಲಿದ್, ಸೈಫುದ್ದೀನ್, ಕಿಬ್ಲಾ ಹುಸೇನರನ್ನು ನಿಯಾಮಕ ಮಾಡಿದ

ವಾಲಿ ಮಹಮುದರನ್ನು ಮುಟ್ಟುವುದಕ್ಕೆ ಮುಜಾಹಿದನಿಗೆ ಧೈರ್ಯ ಸಾಲದಾಯಿತು. ಪ್ರಜೆಗಳಲ್ಲದೆ, ಸೈನ್ಯವೇ ದಂಗೆ ಏಳಬಹುದೆಂಬ ಭೀತಿ ಯಿಂದ ಅವನು ತೆಪ್ಪಗಾದ.

ದೊಡ್ಡ ಸುಲ್ತಾನರ ಅರಮನೆಯಲ್ಲಿ ಸಹಸ್ರಾರು ಸ್ತ್ರೀಯರಿದ್ದರು. ಅವರಲ್ಲಿ ನಾಲ್ವರನ್ನು ಮಾತ್ರ ಸುಲ್ತಾನರು ವಿಧ್ಯುಕ್ತವಾಗಿ ಲಗ್ನವಾಗಿದ್ದರು. ಉಳಿದವರೆಲ್ಲಾ ಬಂಗಾರದವರು, ಅವರ ಪರಿವಾರ.

ಮುಜಾಹಿದ್ ರಾಜ್ಯದ ಸರದಾರರನ್ನೆಲ್ಲಾ ಬರಮಾಡಿ ಅರಮನೆಯ ಸ್ತ್ರೀಯರನ್ನು ಅವರಿಗೆ ಹಂಚಿಬಿಟ್ಟ. ಸುರೈಯ್ಯಾ, ಗುಲ್‌ಷನ್ನರನ್ನೂ ಹಿಡಿದು ತಂದು ಆ ಸಮೂಹದಲ್ಲಿ ಸೇರಿಸಿದ್ದರು.

ಸುರೈಯ್ಯನನ್ನು ಕಾಣಲು ಬಂದ ವಾಲಿಗೆ ಈ ಸುದ್ದಿಯನ್ನು ಅವಳ ನಂಬಿಕೆಯಾಳು ಉಮರ್ ತಿಳಿಸಿ

" ಸುರೈಯ್ಯಾ, ಗುಲ್‌ಷನ್ ಬೇಗಮರಿಬ್ಬರನ್ನೂ ಜನಾನಾ ಕಾವಲು ಗಾರರು ಹಿಡಿದುಕೊಂಡು ಹೋದರು." ಎಂದು ಹೇಳಿದ.

ಅರಮನೆಗೆ ಬಂದ ವಾಲಿ ಮುಖ ಮರೆಸಿಕೊಂಡು ಒಂದೆಡೆ ನಿಂತು ಸುಲ್ತಾನರ ' ಕನ್ಯಾದಾನ ' ದ ವಿತರಣೆ ನೋಡುತ್ತಿದ್ದ.

ದಿಲ್ದಾರ್, ಫರ್ಹಾತ್ ಜೆಹ್ರಾ, ನೂರ್, ಜುಬೇದ, ರಜಿಯಾ, ದೌಲತ್, ಚಾಂದನಿ, ಕುರ್ಷೀದ್ ಎಲ್ಲರನ್ನೂ ಹಂಚಿದ್ದು ಮುಗಿಯಲು, ಜನಾನಾ ಖೋಜಾ ಸುರೈಯ್ಯಾ, ಗುಲ್‌ರನ್ನು ಎಳೆದು ತಂದು ಸುಲ್ತಾನರ ಮುಂದೆ ನಿಲ್ಲಿಸಿದ.

ಗುಂಪಿನ ಮಧ್ಯೆ ದಾರಿಬಿಡಿಸಿಕೊಂಡು ಸುಲ್ತಾನರ ಬಳಿಗೆ ಬಂದ ವಾಲಿ

" ಇವರಿಬ್ಬರನ್ನೂ ನನಗೆ ಒಪ್ಪಿಸಬೇಕು "

ಎಂದು ಕೇಳಿದರು.

"ಇವರೇ ಏಕೆ ಬೇಕು ವಾಲಿ – ಬೇರೆಯವರಿಬ್ಬಾರೆ – ಆರಿಸಿಕೊಳ್ಳಬಹುದಲ್ಲ."

"ನನಗೆ ಇವರೇ ಬೇಕು ಜಹಾಪನಾ."

"ಇವರನ್ನು ನಾನು ನಿನಗೆ ಕೊಡುವುದಿಲ್ಲವೆಂದರೆ ?"

ಒರೆಯನ್ನು ಕೈಯಲ್ಲಿ ಹಿಡಿದು ವಾಲಿ, ಅದರೊಳಗಿನಿಂದ ಕತ್ತಿಯನ್ನು ಅರ್ಧ ಹಿರಿದು,

"ನನಗೆ ಬೇಕಾದುದನ್ನು ನಾನು ತೆಗೆದುಕೊಳ್ಳಬಲ್ಲೆ ಜಹಾಪನಾ."

"ಇದು ರಾಜದ್ರೋಹ – ವಾಲಿಯನ್ನು ಸೆರೆ ಹಿಡಿಯಿರಿ" ಎಂದು ವಾಲಿದ್ ಆರ್ಭಟಿಸಿದ.

ನಾಲ್ಕು ಜನ ಸಿಪಾಯಿಗಳು ಬಂದು, ವಾಲಿಯ ನಾಲ್ಕುಕಡೆ ನಿಂತರು.

ವಾಲಿ ಅವರನ್ನು ನೋಡಿ

"ಸುಲೇಮಾನ್, ಮುಬಾರಕ್, ಸತ್ತಾರ್, ಅಹಮದ್ – ನೀವು ಗತಿಸಿದ ಷಹನ್‌ಷಾ ಅವರ ಉಪ್ಪು ತಿಂದಿರುವುದನ್ನು ಮರೆಯಬೇಡಿ. ಇವರಿಬ್ಬರೂ ನನ್ನ ತಾಯಂದಿರು – ನಮ್ಮ ಗತಿಸಿದ ಪ್ರಭುವಿನ ನೆಚ್ಚಿನ ರಾಣಿಯರು – ನಮ್ಮೆಲ್ಲರಿಗಿಂತಲೂ ಸುಲ್ತಾನರ ಸೇವೆಯನ್ನು ಭಕ್ತಿ ನಿಷ್ಠೆಗಳಿಂದ ಮಾಡಿದ್ದಾರೆ – ನನ್ನ ಮೈಮುಟ್ಟಲು ಯಾರಿಗೆ ಧೈರ್ಯ."

ಎಂದು ಒರೆಯಿಂದ ಕತ್ತಿ ಸೆಳೆಯಲು ನಾಲ್ವರು ಸಿಪಾಯಿಗಳು ತಮ್ಮ ತಳವಾರಗಳನ್ನು ಕೆಳಗಿಟ್ಟು

"ಮಾಫ್ ಮಾಡಬೇಕು – ಸರ್ದಾರ್" ಎಂದರು.

ಸುಲ್ತಾನ್ ಅಲ್ಲಿ ಕೂಡಲಾಗದೆ ಒಳಗೆದ್ದು ಹೋದ.

ಸುರೈಯ್ಯಾ, ಗುಲ್ ಇದ್ದಲ್ಲಿಗೆ ಹೋಗಿ ವಾಲಿ ಮಹಮದ್

"ಬನ್ನಿ – ಅಮ್ಮಾಜಾನ್" ಎಂದರು.

ಸಭಾಸದರು, ದಾರಿ ಬಿಟ್ಟುಕೊಟ್ಟು ತಮ್ಮ ಮೂಕಗೌರವ ವಾಲಿ ಮಹಮದರಿಗೆ ಸಲ್ಲಿಸಿದರು.

ವಾಲಿ ಮಹಮದರ ಭವಿಷ್ಯ ಯೋಚಿಸುತ್ತ ಅಧೀರಳಾಗಿದ್ದ ಸುರೈಯ್ಯ ಮನೆತಲುಪಿದ ಕೂಡಲೆ,

"ನಮ್ಮನ್ನು ಕಾಪಾಡಿದೆ – ನಿನ್ನ ಗತಿಯೇನು ವಾಲಿ"

ಎಂದು ಕೇಳಿದಳು.

"ವಾಲಿಯ ಮೇಲೆ ಕೈಯೆತ್ತುವ ಗಂಡಸು ಕಲ್ಬುರ್ಗಿಯಲ್ಲಿಲ್ಲ ಅಮ್ಮಾಜಿ.

ನೀವು ಅರೆಕ್ಷಣವೂ ಇಲ್ಲಿ ನಿಲ್ಲಬೇಡಿ. ಮುಜಾಹಿದ್ ತನಗಾದ ಅಪಮಾನಕ್ಕೆ ಪ್ರತೀಕಾರ ಕೈಗೊಳ್ಳುವ ಮೊದಲೇ ನೀವು ರಾಜಧಾನಿ ಬಿಟ್ಟು ಬಿಡಿ. ನಿಮ್ಮನ್ನು ಸುರಕ್ಷಿತವಾಗಿ ಹಜ್ ಮುಟ್ಟಿಸಿ ಬರಲು ನಾನು ಎಲ್ಲ ವ್ಯವಸ್ಥೆ ಮಾಡುತ್ತೇನೆ."

"ನೀನು ಹಜ್‌ಗೆ ಯಾವಾಗ ಬರುತ್ತೀ ?"

"ಬೇಗ ಬರುತ್ತೇನೆ ಅಮ್ಮಾಜಾನ್ – ಬಹಳ ಕಾಲ ನಾನು ಕಲ್ಬುರ್ಗಿ ಯಲ್ಲುಳಿಯುವುದಿಲ್ಲ. ಗತಿಸಿದ ಸುಲ್ತಾನರಿಗೆ ಜಿಹಾ ಎಂದ ಈ ನಾಲಗೆ ಇನ್ನೊಬ್ಬ ರಿಗೆ ಜಿಹಾ ಅನ್ನುವುದಿಲ್ಲ – ನಾನು ವಿಜಯನಗರಕ್ಕೆ ಹೋಗಿ ಬರಬೇಕಾಗಿದೆ. ಅಲ್ಲಿ ಒಬ್ಬ ಮಹಾಪುರುಷ ಇದ್ದಾನೆ. ಅವನ ದರ್ಶನ ಮಾಡಿಕೊಂಡು ಹಜ್‌ನಲ್ಲಿ ನಿಮ್ಮ ಭೇಟಿ ತೆಗೆದುಕೊಳ್ಳುತ್ತೇನೆ"

ಎಂದು ಮೊಣಕಾಲೂರಿ ಕುಳಿತು ತಾಯಂದಿರಿಬ್ಬರ ಹಸ್ತ ಚುಂಬಿಸಿದರು.

ಸುರೈಯ್ಯ, ಗುಲ್ ಇಬ್ಬರೂ ಅವರ ತಲೆಯಮೇಲೆ ಕೈಯಿಟ್ಟು ಹರಸಿದರು.

## ೨೨

ಗತಿಸಿದ ಸುಲ್ತಾನರ ಜನಾನಾ ಸ್ತ್ರೀಯರಿಗೆ ಒದಗಿದ ದುಸ್ಥಿತಿ ಕೇಳಿ ವಿಜಯನಗರವೇ ಮಮ್ಮಲ ಮರುಗಿತು.

"ತಂದೆಯ ಪ್ರೀತಿಪಾತ್ರರಾಗಿದ್ದ ಸ್ತ್ರೀಯರಮೇಲೇ ಇಂಥ ಅತ್ಯಾಚಾರವನ್ನಾಚರಿಸಿದ ಈ ನರರಾಕ್ಷಸನ ಕೈಗೆ ಬೇರೆ ಸ್ತ್ರೀಯರು ಸಿಕ್ಕಿದರೇನು ಗತಿ ?"

ಎಂದು ಬುಕ್ಕರಾಯರು ಉದ್ಗಾರವೆಳೆದರು.

ಸುಲ್ತಾನ್ ಮುಜಾಹಿದ್, ವಾಹಿದ್ ಮತ್ತು ಸೈಫುದ್ದೀನರ ಕೈಗೊಂಬೆ ಯಾಗಿದ್ದ. ಅಪ್ರಬುದ್ಧ ಸುಲ್ತಾನನ ಮನಸ್ಸನ್ನು ಕೆಡಿಸಿ, ಅದರ ತುಂಬ ಜಾತಿ ವಿದ್ವೇಷ ತುಂಬಲು ಇಬ್ಬರೂ ಸತತವಾಗಿ ಶ್ರಮಿಸಲಾರಂಭಿಸಿದರು.

ಕಲ್ಬುರ್ಗಿಯ ಹಿಂದೂ ದೇವಾಲಯಗಳು ಒಂದೊಂದಾಗಿ ನಾಶವಾಗುತ್ತ ಬಂದವು. ಹಿಂದುಗಳು ತಮ್ಮ ದೈನಂದಿನ ಚಟುವಟಿಕೆಗಳನ್ನು ಮುಂದು ವರಿಸುವುದೇ ಕಷ್ಟವಾಗುತ್ತ ಬಂದಿತು. ಪುಂಡ ಮುಸ್ಲಿಮರು ಧರ್ಮದ ಹೆಸರಿನಲ್ಲಿ ಹಿಂದೂ, ಮುಸ್ಲಿಮರಿಬ್ಬರನ್ನೂ ಸುಲಿದು ತಿನ್ನಲಾರಂಭಿಸಿದ್ದರು. ವಾಹಿದ್ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಅವರಿಗೆ ನೆರವಾಗುತ್ತಿದ್ದ.

ಕಲ್ಬುರ್ಗಿ ಬಿಟ್ಟು ಓಡಿಬಂದ ಸಹಸ್ರಾರು ಹಿಂದುಗಳು ಬುಕ್ಕರಾಯರಲ್ಲಿ ಮೊರೆಯಿಟ್ಟು ತಮ್ಮ ಪರಿಸ್ಥಿತಿಯನ್ನು ನಿವೇದಿಸುತ್ತಾ

"ಕಲ್ಬುರ್ಗಿಯಲ್ಲಿ ಒಂದು ಹಿಂದೂಪಿಳ್ಳೆ ಉಳಿಯದಂತೆ ಮಾಡುವುದಾಗಿ ಮುಜಾಹಿದ್ ಮತ್ತು ವಾಹಿದ್ ಶಪಥತೊಟ್ಟಿದ್ದಾರೆ ಮಹಾಪ್ರಭು"

ಎಂದು ಅರಿಕೆಮಾಡಿಕೊಂಡರು.

ಸಂತ್ರಸ್ತರ ಸಲುವಾಗಿಯೇ ಒಂದು ಹೊಸ ಅಗ್ರಹಾರ ನಿರ್ಮಿತ ವಾಯಿತು.

ಒಂದು ದಿನ ಸಂಜೆ.

'ಗಿರಿವನ'ದಲ್ಲಿ ಶ್ರೀ ವಿದ್ಯಾರಣ್ಯರು ಸಂಧ್ಯಾಧ್ಯಾನನಿರತರಾಗಿ ಕುಳಿತಿದ್ದಾರೆ.

ಶ್ರೀಗುರುಗಳ ಬಳಿಗೆ ಬಂದ ವನದ ಮಾಲಿ ಬೀರಪ್ಪ ಕೈಕಟ್ಟಿನಿಂತ.

ಶ್ರೀಗುರುಗಳು ಸ್ವಲ್ಪ ಕಾಲಾನಂತರ ಕಣ್ಣು ತೆರೆದು ನೋಡಿ

"ಏನು ಬೀರಣ್ಣ" ಎಂದರು.

"ಕ್ಷಮಿಸಬೇಕು – ಒಬ್ಬ ಫಕೀರರು ತಮ್ಮನ್ನು ಬಂದು ನೋಡಲು ಕಾದಿದ್ದಾರೆ."

"ಫಕೀರರೆ !"

"ಹೌದು ಬುದ್ಧಿ"

"ಒಳಗೆ ಬರಮಾಡು"

"ಫಕೀರರು ಬಂದಾಗ, ನಾನೂ ಇಲ್ಲೇ ಇರ್ತೀನಿ ಬುದ್ಧಿ"

"ಏಕೆ ?"

"ನನಗೆ ಭಯವಾಗುತ್ತದೆ. ಫಕೀರನೋ, ಕಲ್ಬುರ್ಗಿಯ ಗೂಢ ಚಾರನೋ ಎಂದು."

"ಯಾರಾದರೇನು ? ಸನ್ಯಾಸಿಯಿಂದ ಅವನೇನು ಕಸುಕೊಳ್ಳಬೇಕು."

"ಗುರುಸ್ವಾಮಿಗಳ ಮೈಮೇಲೆ ಕೈಮಾಡಿದರೆ !"

ಶ್ರೀ ವಿದ್ಯಾರಣ್ಯರು ನಸುನಗುತ್ತ

"ತಾಯಿ ಭುವನೇಶ್ವರಿಯ ಲೀಲೆಗೆ ಆದ್ಯಂತವೆಲ್ಲಿದೆಯಪ್ಪ. ನಿನ್ನ ರೂಪ ಹೊತ್ತು ಬಂದು ಜಗನ್ಮಾತೆ ನನ್ನನ್ನು ಕಾಪಾಡಲೆಳಸಿದರೆ ನಾನೇಕೆ ಬೇಡವೆನ್ನಲಿ – ಫಕೀರನನ್ನು ಬಹಳ ಹೊತ್ತು ಕಾಯಿಸಬಾರದು. ಒಳಗೆ ಬರಮಾಡು." ಎಂದರು.

ಬೀರಪ್ಪನಾಯಕ ಫಕೀರನನ್ನು ಕರೆತಂದು, ಶ್ರೀಗುರುಗಳ ಬಳಿ ಬಿಟ್ಟು, ತಾನು ಮೈಯೆಲ್ಲಾ ಕಣ್ಣಾಗಿ ಅವರನ್ನೇ ನೋಡುತ್ತ ಸಮೀಪದಲ್ಲಿ ನಿಂತ.

ಶ್ರೀಗುರುಗಳು ಫಕೀರನನ್ನು ದಿಟ್ಟಿಸಿ ನೋಡಿ

"ನಿಮ್ಮನ್ನು ಹಿಂದೆಲ್ಲಿಯೋ ಕಂಡಂತಿದೆ. ಗುರುತು ಹತ್ತಲ್ಲೊಲ್ಲದು."

"ಕಂಡಿದ್ದಿರಿ ಗುರುದೇವಾ. ಬಹಮನಿ ಸುಲ್ತಾನನ ಪ್ರತಿನಿಧಿಯಾಗಿ, ವಾಲಿ ಮಹಮದ್ ಎಂಬ ಅಭಿದಾನ ಹೊತ್ತು ಇಲ್ಲಿಗೆ ಬಂದಿದ್ದವನು ಈ ಫಕೀರನೇ."

"ವಾಲಿ ಮಹಮದ್ – ರಣಪಂಡಿತ ವಾಲಿ ಮಹಮದ್ ! ನಿಮ್ಮ ಪರಾಕ್ರಮ ಔದಾರ್ಯ ಸುಹೃದಯತೆಯ ಬಗ್ಗೆ ನಾವು ಸಾಕಷ್ಟು ಕೇಳಿದ್ದೇವೆ ಬಂಧು – ಬನ್ನಿ. ಹಿಂದೆ ರಾಜಪ್ರತಿನಿಧಿಯಾಗಿ ಬಂದಿದ್ದ ವಾಲಿ ಮಹಮದರಿಗೆ ಸ್ವಯಂ ಮಹಾರಾಜರು ಸ್ವಾಗತ ಬಯಸಿದರು ; ಈಗ ಬಂದಿರುವ ಫಕೀರರಿಗೆ ಸನ್ಯಾಸಿ ಸ್ವಾಗತ ಬಯಸುತ್ತಾನೆ."

ಶ್ರೀಗುರುಗಳ ಪದತಲದಲ್ಲಿ ಕುಳಿತ ವಾಲಿ ಮಹಮದ್ ಕಲ್ಬುರ್ಗಿಯ ಸುದ್ದಿಗಳನ್ನೆಲ್ಲಾ ಸಾದ್ಯಂತವಾಗಿ ವಿವರಿಸಿ, ಸುರೈಯ್ಯ ಗುಲ್ ಇವರ ಪ್ರಕರಣ ನಿರೂಪಿಸುತ್ತ

"ಮಾನವೀಯ ಸಂಬಂಧವೂ ಇಲ್ಲದೆಡೆ ನಿಲ್ಲಲು ಮನಸ್ಸಾಗಲಿಲ್ಲ ಗುರುದೇವಾ ?"

"ಈಗ ಆ ತಾಯಿಂದಿರೆಲ್ಲಿ ?"

"ಹಜ್‌ಗೆ ಯಾತ್ರೆ ಹೊರಟಿದ್ದಾರೆ."

"ಅವರನ್ನು ಇಲ್ಲಿ ಕಳಿಸಿಕೊಡಬಹುದಾಗಿತ್ತಲ್ಲ. ಶ್ರೀ ಭುವನೇಶ್ವರಿ ತನ್ನ ಇನ್ನಿಬ್ಬರು ಮಕ್ಕಳಿಗೆ ಅನ್ನ ನೀಡಲು ಅಸಮರ್ಥಳಾಗಿದ್ದಾಳೆಯೇ ?"

"ಅದೇ ಕಾರಣವಾಗಿ ಮತ್ತೆ ವಿಜಯನಗರಕ್ಕೂ ಕಲ್ಬುರ್ಗಿಗೂ ಯುದ್ಧ ಸಂಭವಿಸಬಾರದು. ಯುದ್ಧದ ಬೇಗೆಯಲ್ಲಿ ಬೆಂದು ನಾನು ಸೀದು ಹೋಗಿದ್ದೇನೆ. ಒಬ್ಬ ಸುಲ್ತಾನನ ವೈಭವ, ಪ್ರತಾಪ ಮೆರೆಸಲು ಎಷ್ಟು ಜನ

ಬಲಿಯಾಗಬೇಕು – ಎಷ್ಟು ಮಂದಿ ನಿರಪರಾಧಿ ಸ್ತ್ರೀಪುರುಷರು ಈ ಅಗ್ನಿ ಕುಂಡದಲ್ಲಿ ಬೇಯಬೇಕು – ಗುರುದೇವಾ, ಮುಂದೆ ಯುದ್ಧಗಳೇ ಸಂಭವಿಸ ದಂತೆ ಮಾಡಲು ಮಾರ್ಗವಿಲ್ಲವೇ ?"

" ಇದೆ."

" ಯಾವದು ?"

" ಸರ್ದಾರರು ಫಕೀರರಾಗುವುದು."

"…………………"

" ಯುದ್ಧ ಮಾನವನ ಮನಸ್ಸಿನ ಒಂದು ಪ್ರತೀಕ ಮಾತ್ರ. ಮನಸ್ಸು ಶುದ್ಧವಾದಲ್ಲದೆ – ನಾನೂ ಬದುಕಬೇಕು, ನನ್ನ ಹಾಗೆ ಎಲ್ಲರೂ ಬದುಕ ಬೇಕು ಎಂಬ ಭಾವನೆ ಬೆಳೆದಲ್ಲದೆ ಯುದ್ಧವನ್ನೂ ತಡೆಗಟ್ಟಲು ಸಾಧ್ಯವಿಲ್ಲ."

" ನನ್ನ ಮನಸ್ಸು ಅಲ್ಲಕಲ್ಲೋಲವಾಗಿದೆ. ಮನಃಶಾಂತಿ ದೊರಕಿಸಿ ಕೊಳ್ಳುವುದು ಹೇಗೆ ?"

" ಹಜ್ ಎನ್ನುವುದು ನಿಮ್ಮ ಯಾತ್ರಾಸ್ಥಳವಲ್ಲವೇ ?"

" ಹೌದು."

" ಅಲ್ಲಿಗೇ ಹೋಗಿ ನಿಮ್ಮ ಮನಸ್ಸಿನ ಸಮಸ್ತ ದುಃಖವನ್ನೂ ಭಗವಂತನ ಪಾದಕ್ಕೆ ಒಪ್ಪಿಸಿ

' ಅನ್ಯಥಾ ಶರಣಂ ನಾಸ್ತಿ
ತ್ವಮೇವ ಶರಣಂ ಮಮ '

—ಸ್ವಾಮಿ, ನನಗೆ ಯಾರೂ ದಿಕ್ಕಿಲ್ಲ. ನನ್ನ ಗತಿ, ಮತಿ, ಪ್ರಾಣ ಎಲ್ಲವೂ ನೀನೇ ಆಗಿದ್ದೀ ಎಂದು ಅವನ ಮರೆಹೊಗುವುದೊಂದೇ ಮಾರ್ಗ."

" ಪವಿತ್ರ ಕುರಾನದಲ್ಲಿಯೂ ಇದೇ ಮಾತು ಬಂದಿದೆ ಗುರುದೇವಾ."

" ನಿಜ ಬಂಧು ನಿಜ."

" ಗುರುದೇವಾ – ನಾನು ಬಂಧವಿಮುಕ್ತನಾಗುತ್ತೇನೆಯೇ ?"

" ಆಗಿಯೇ ಇದ್ದೀ ವಾಲಿ ಮುಹಮುದ್."

" ಹೇಗೆ ?"

" ಸುಲ್ತಾನರ ಅರಸಿಯರಲ್ಲಿ ತಾಯ್ತನವನ್ನು ಕಂಡು ಅವರ ಗೌರವ ಕಾಪಾಡಿದ ಪುಣ್ಯವಂತ ನೀನು. ನಿನ್ನ ಪರಿಶುದ್ಧಾಂತಃಕರಣ ಕಂಡು ಶ್ರೀಭುವನೇಶ್ವರಿ ಪರಮಸಂತೋಷಗೊಂಡಿದ್ದಾಳೆ. ನೀನು ಇದ್ದಲ್ಲಿ ಅವಳು

ಎಚ್ಚರದಿಂದ ನಿನ್ನ ಯೋಗಕ್ಷೇಮ ನೋಡಿಕೊಳ್ಳುತ್ತಾಳೆ – ನಿನ್ನ ಕಣ್ಣಲ್ಲಿ ನೀರೂರಿದರೆ ತಾಯಿ ತನ್ನ ಸೆರಗಿನ ಕೊನೆಯಿಂದ ಅದನ್ನೊರಸುತ್ತಾಳೆ – ಅಮ್ಮ ಎಂದು ನೀನು ಕೂಗಿದರೆ ಜಗನ್ನಾಯಿಕೆಯ ಮೊಲೆಗಳುಬ್ಬಿ ಹಾಲು ಚಿಮ್ಮುತ್ತದೆ."

ಆನಂದಪರವಶರಾದ ವಾಲಿ ಮಹಮದ್ ಶ್ರೀಗುರುದೇವರ ಪಾದಗಳನ್ನು ಚುಂಬಿಸಿ

" ಅಪ್ಪಣೆಯಿತ್ತರೆ ಹೊರಡುತ್ತೇನೆ. ಹಜ್‌ನಲ್ಲಿ ನನಗಾಗಿ ಕಾದಿರುವ ತಾಯಂದಿರ ಸೇವೆಮಾಡಿ ಧನ್ಯನಾಗುತ್ತೇನೆ" ಎಂದರು.

ಶ್ರೀಗುರುಗಳು ಕೈಯೆತ್ತಿ ಅವರನ್ನು ಹರಸುತ್ತಾ

" ಜಯ ಭುವನೇಶ್ವರಿ " ಎಂದರು.

## ೨೩

ಮುಜಾಹಿದ್ ಹೆಸರಿಗಷ್ಟೇ ಕಲ್ಬುರ್ಗಿಯ ಸುಲ್ತಾನನಾಗಿದ್ದ ; ಸುಲ್ತಾನ್‌ಗಿರಿಯ ಎಲ್ಲ ಅಧಿಕಾರವನ್ನೂ ವಾಹಿದ್ ಖಾನ್ ನಿರ್ವಹಿಸುತ್ತಾ ಹತ್ತೊಂಭತ್ತು ವರ್ಷದ ಸುಲ್ತಾನನ್ನು ಸೂತ್ರದ ಗೊಂಬೆಯಂತೆ ಕುಣಿಸುತ್ತಿದ್ದ.

ವಾಹಿದ್ ಖಾನನ ವಿರುದ್ಧ ದರ್ಬಾರಿನಲ್ಲಿ ಸಾಕಷ್ಟು ಅಸಹನೆ ಮೂಡಿತು. ಅತೃಪ್ತರಾಗಿದ್ದ ಸರ್ದಾರರೆಲ್ಲಾ ಮುಜಾಹಿದನ ಸೋದರಮಾವ ದಾವೂದ್ ಖಾನನ ಸುತ್ತಸೇರಿ ವಾಹಿದ್ ಖಾನನ ದರ್ಪವನ್ನು ಕೊನೆಗಾಣಿಸುವ ಕಾಲ ನಿರೀಕ್ಷಣೆಯಲ್ಲಿದ್ದರು.

ವಾಹಿದ್ ಖಾನನ ಪ್ರೇರಣೆಯಂತೆ ಮುಜಾಹಿದ್ ವಿಜಯನಗರದರಸರಿಗೆ ಪತ್ರ ಬರೆದು

"ತುಂಗಭದ್ರೆಯ ಉತ್ತರ ಪ್ರದೇಶಕ್ಕೆ ನೀವು ಕಾಲಿಡಕೂಡದು.

ಬಂಕಾಪುರದ ಕೋಟೆಯನ್ನು ನಮಗೆ ಒಪ್ಪಿಸಬೇಕು" ಎಂದು ತಿಳಿಸಿದ.

ಮುಜಾಹಿದನಿಗೆ ಉತ್ತರಿಸುತ್ತಾ ಶ್ರೀ ಬುಕ್ಕರಾಯರು

"ಬಂಕಾಪುರವನ್ನಾಗಲಿ, ನಮಗೆ ಸೇರಿದ ಯಾವ ಭಾಗವನ್ನಾಗಲಿ ಕೇಳುವ ಅಧಿಕಾರ ನಿಮಗಿಲ್ಲ. ರಾಯಚೂರು, ಮುದಕಲ್ಲು, ಕೋಟೆಗಳು ಎಂದಿನಿಂದಲೂ ಆನೆಗೊಂದಿ ಅರಸರಿಗೆ ಸೇರಿದ್ದವು. ರಾಯಚೂರು ಪ್ರಾಂತದ ಮೇಲೆ ನಿಮಗೆ ಯಾವ ಅಧಿಕಾರವೂ ಇಲ್ಲ. ಕೃಷ್ಣಾನದಿಯ ದಕ್ಷಿಣಕ್ಕೆ ನೀವು ಕಾಲಿಡಕೂಡದು. ನೀವು ಅವರಿವರ ಮಾತು ಕೇಳಿಕೊಂಡು ವೃಥಾ ಜಗಳ ಆರಂಭಿಸುತ್ತಿದ್ದೀರಿ. ವಿಜಯನಗರದ ಸಂಸ್ಥಾನ ಕಬಳಿಸುವ ನಿಮ್ಮ ಹಿರಿಯರ ಪ್ರಯತ್ನ ಏನಾಯಿತೆಂಬುದನ್ನು ಚೆನ್ನಾಗಿ ನೆನಪಿನಲ್ಲಿಟ್ಟುಕೊಳ್ಳಿ. ಈಶ್ವರೇಚ್ಛೆಯಿಂದ ನಿಮಗೆ ದೊರೆತಿರುವ ಪ್ರದೇಶವನ್ನು ಆಳಿಕೊಂಡು, ನೆರೆ ಹೊರೆಯವರ ಜತೆಯಲ್ಲಿ ಸೌಹಾರ್ದದಿಂದ ಬಾಳುವೆ ಮಾಡಿಕೊಂಡು ಹೋಗುವುದು ಒಳ್ಳೆಯದು."

ಎಂದು ತಿಳಿಸಿದರು.

ಬಿಸಿರಕ್ತದ ಮುಜಾಹಿದ್ ಹಿರಿಯ ಸರದಾರರ ಸಲಹೆಯನ್ನೂ ಕೇಳದೆ, ಸೈನ್ಯಸಮೇತನಾಗಿ ಹೊರಟು ಆದವಾನಿಗೆ ಮುತ್ತಿಗೆ ಹಾಕಿದ.

ಬುಕ್ಕರಾಯರು ಅವನನ್ನು ಎದುರಿಸಲು ಯತ್ನಿಸಲಿಲ್ಲ. ಸೊಂಡೂರಿನ ಗುಡ್ಡದತ್ತ ಸರಿದರು. ರಾಯರು ಹೆದರಿ ಸೊಂಡೂರು ಗುಡ್ಡದಲ್ಲಿ ಮುಖ ಮರೆಸಿಕೊಂಡಿದ್ದಾರೆಂದು ಭಾವಿಸಿದ ಮುಜಾಹಿದ್ ದಿಟ್ಟತನದಿಂದ ವಿಜಯನಗರಕ್ಕೆ ಮುತ್ತಿಗೆ ಹಾಕಿದ.

ವಿಜಯನಗರದ ನೆರೆಹೊರೆಯಲ್ಲಿದ್ದ ಅಸಂಖ್ಯಾತ ದೇವಾಲಯಗಳನ್ನು ನಾಶಮಾಡಿ, ದೇವತಾಮೂರ್ತಿಗಳನ್ನು ಅಪಮಾನಗೊಳಿಸುವುದು ಮುಜಾಹಿದನ ಪ್ರಧಾನಕಾರ್ಯವಾಯಿತು.

ಮಾಲವಂತ ರಘುನಾಥಸ್ವಾಮಿ ದೇವಾಲಯದ ಬಳಿಯೊಂದು ಮಾರುತಿ ದೇವಾಲಯ. ಪುರುಷಪ್ರಮಾಣದ ವೀರ ಹನುಮಂತನ ವಿಗ್ರಹವನ್ನು ಜನ ಪರಮಭಕ್ತಿಯಿಂದ ಆರಾಧಿಸುತ್ತಿದ್ದರು. ಅರ್ಚಕರಾಗಿದ್ದ ವಿಜಯದಾಸರು ಮಾರುತಿಯ ಉಪಾಸನೆಯನ್ನು ಪರಮ ಭಕ್ತಿ ನಿಷ್ಠೆಯಿಂದ ಆಚರಿಸುತ್ತಿದ್ದರು.

ಸುಲ್ತಾನನ ದಂಡು ಮಾರುತಿ ದೇವಾಲಯದ ಬಳಿಗೆ ಬಂದಾಗ ದಾಸರು ಪೂಜೆ ಮುಗಿಸಿ, ಹೊರಗೆ ಗುಂಪುಕಟ್ಟಿ ಕೂಡಿದ್ದ ಮಂಗಗಳಿಗೆ

ಪ್ರಸಾದ ವಿನಿಯೋಗಿಸಲು ಬಂದರು. ಸುಲ್ತಾನರ ಇಬ್ಬರು ಸಿಪಾಯಿಗಳು ಅವರನ್ನು ಹಿಡಿದು, ಸುಲ್ತಾನನ ಮುಂದೆ ತಂದು ನಿಲ್ಲಿಸಿದರು.

ಮಾರುತಿಯ ವಿಗ್ರಹ ಭೇದಿಸಲು ಸುಲ್ತಾನನ ಸೈನಿಕರು ದೇವಾಲಯ ದೊಳಗೆ ಹೋಗುತ್ತಿದ್ದುದನ್ನು ಕಂಡು ದಾಸರು

" ಇಲ್ಲಿ ಅತ್ಯಾಚಾರ ಮಾಡಬೇಡಿ ಸುಲ್ತಾನರೇ" ಎಂದರು.

ಸುಲ್ತಾನ ಗಹಗಹಿಸಿ ನಗುತ್ತ

" ಈ ಕಲ್ಲು ಕೋತಿ ನಿನ್ನನ್ನು ಹೇಗೆ ಕಾಪಾಡುತ್ತದೋ ನೋಡು ತ್ತೇನೆ" ಎಂದ.

ದಾಸರು ಮಾರುತಿ ವಿಗ್ರಹವನ್ನು ರಕ್ಷಿಸಲು ಸುಲ್ತಾನನ ಸೈನಿಕರ ಕೈಯಿಂದ ಬಿಡಿಸಿಕೊಳ್ಳಲು ಯತ್ನಿಸಲು ಸೈನಿಕರು ಕತ್ತಿಯ ಹಿಡಿಯಿಂದ ಅವರನ್ನು ಘಾತಿಸಿದರು.

ರಕ್ತದ ಮಡುವಿನಲ್ಲಿ ಮುಳುಗಿ, ಕೆಳಗೆ ಬಿದ್ದಿದ್ದ ದಾಸರ ಮೇಲೆ ಉಗುಳಿ, ತಮ್ಮ ಎಡಗಾಲಿನಿಂದ ಅವರನ್ನೊದೆಯುತ್ತ ಸುಲ್ತಾನ

" ಕೋತಿ ಬಂದು ನಿನ್ನನ್ನು ಕಾಪಾಡಿತೇನೋ ಬೊಮ್ಮನ್" ಎಂದ.

ಮೃತ್ಯುಮುಖರಾಗಿದ್ದ ದಾಸರ ಕಿವಿಗೆ ಮಾರುತಿ ವಿಗ್ರಹ ವಿಚ್ಛೇದನದ ಧ್ವನಿ ಸಿಡಿಲಿನಂತೆ ಬಂದೆರಗಿತು.

ದಿಟ್ಟತನದಿಂದ ಸುಲ್ತಾನನ್ನು ನೋಡಿದ ದಾಸರು

" ಮ್ಲೇಚ್ಛನಾಯಿ - ನನ್ನ ಮಾರುತಿಗೆ ನೀನು ಮಾಡಿರುವ ಅಪಮಾ ನಕ್ಕೆ ಯೋಗ್ಯ ಪ್ರತಿಫಲ ಉಪಭೋಗಿಸುವೆ. ನೀನು ಜೀವಂತನಾಗಿ ರಾಜ ಧಾನಿ ಸೇರುವೆ ಎಂದು ಭಾವಿಸಿರುವೆಯಾ ?" ಎಂದರು.

ಸೈನಿಕರಲೊಬ್ಬ ದಾಸರ ಎದೆಗೆ ತನ್ನ ಕತ್ತಿಯಿಂದಿರಿದುಬಿಟ್ಟ.

ಸತ್ತುಬಿದ್ದಿದ್ದ ದಾಸರನ್ನು ಕಂಡು ಸುಲ್ತಾನ ಥೂತ್ಕಾರಮಾಡಿದ. ಬ್ರಾಹ್ಮಣನ ಶಾಪದ ನುಡಿ ಅವನ ಹೃದಯದಲ್ಲಿ ನೆಟ್ಟುಬಿಟ್ಟಿತು.

ಬುಕ್ಕರಾಯರು ಸೊಂಡೂರು ಗುಡ್ಡ ಬಿಟ್ಟು ಬಂದು ಮುಜಾಹಿದನ ಸೈನ್ಯವನ್ನೆದುರಿಸಿದರು. ಆದವಾನಿಯತ್ತ ಸಾಗಿದ್ದ ಮಾರಪ್ಪನಾಯಕನ ಇಪ್ಪತ್ತು ಸಹಸ್ರ ಅಶ್ವಬಲ, ಅಸಂಖ್ಯಾತ ಪದಾತಿ ಸೈನ್ಯ ಬಂದು ಸುಲ್ತಾನನನ್ನೆದುರಿ ಸಿತು. ಉಭಯಪಾರ್ಶ್ವಗಳಲ್ಲಿಯೂ ಸುಲ್ತಾನನ ಸೈನ್ಯದ ಮೇಲೆ ಧಾಳಿ ಆರಂಭವಾಗಲು, ತಿಮ್ಮಾಪುರದ ಧರ್ಮಸಮುದ್ರದ ಬಳಿಯಿಂದ, ಸುಲ್ತಾನರ

ಸೋದರನಾದ ದಾವೂದ್‌ಖಾನ್ ತನ್ನ ನೆಲೆಯನ್ನು ಬಿಟ್ಟು ಸುಲ್ತಾನನ ನೆರವಿಗೆ ಧಾವಿಸಿ ಬಂದ.

ತನ್ನ ನೆಲೆಯನ್ನು ಬಿಟ್ಟು ಬಂದ ದಾವೂದ್‌ಖಾನನನ್ನು ನೋಡಿ ಆಗ್ರಹಗೊಂಡ ಸುಲ್ತಾನ, ಎಲ್ಲರೆದುರಿಗೆ ಅವನ ಛೀಮಾರಿ ಮಾಡಿದ. ದಾವೂದ್‌ಖಾನ್ ತಾತ್ಕಾಲಿಕವಾಗಿ ಅಪಮಾನ ನುಂಗಿಕೊಂಡು, ಪ್ರತೀಕಾರ ಕೈಗೊಳ್ಳಲು ಸಮಯ ಕಾಯಲಾರಂಭಿಸಿದ.

ವಿಜಯನಗರದ ಸೈನ್ಯದ ಒಂದು ತುಕಡಿ ತಿಮ್ಮಾಪುರವನ್ನು ಬಳಸಿ, ಅತ್ತಣಿಂದಲೂ ಸುಲ್ತಾನನ ಮೇಲೆರಗಿ ಬಂದಿತು.

ನಾಲ್ಕುಕಡೆಗಳಿಂದ ಕಬಳಿಸಲ್ಪಟ್ಟ ಸುಲ್ತಾನ, ವಿಜಯನಗರ ಬಿಟ್ಟು ಓಡಿ ಆದವಾನಿ ಮುಂದೆ ಕುಳಿತ. ಒಂಭತ್ತು ತಿಂಗಳು ಕಾದರೂ ಸುಲ್ತಾನನಿಗೆ ಆದವಾನಿ ವಶವಾಗಲಿಲ್ಲ. ಸಹಸ್ರಾರು ಸೈನಿಕರನ್ನು ಬಲಿಗೊಟ್ಟಿದ್ದ ಸುಲ್ತಾನ ಬೇಸತ್ತು, ಅಳಿದುಳಿದ ಸೈನ್ಯದೊಂದಿಗೆ ಕಲ್ಬುರ್ಗಿ ಕಡೆ ತಿರುಗಿದ.

ಆದವಾನಿ ಬಿಟ್ಟು ಹೊರಟಮೇಲೆ, ಹತ್ತೊಂಭತ್ತನೆಯ ಮೈಲಿಯ ಬಳಿ ಸುಲ್ತಾನನ ಸೈನ್ಯ ವಿಶ್ರಮಿಸಿಕೊಳ್ಳಲು ಬೀಡು ಬಿಟ್ಟಿತು.

ಮಧ್ಯ ರಾತ್ರಿ ಕಳೆದಿದೆ.

ಸುಲ್ತಾನ, ಸೈನಿಕರು ಎಲ್ಲರೂ ಮಲಗಿ ನಿದ್ರಿಸುತ್ತಿದ್ದಾರೆ. ಕೆಲವು ಕಾಪಿನ ಭಟರಷ್ಟೇ ಪಾಳ್ಯದ ಕಾವಲು ಕಾಯುತ್ತಿದ್ದಾರೆ.

ದಾವೂದ್‌ಖಾನ್ ಮೂರುಜನ ಸಂಗಡಿಗರೊಂದಿಗೆ ಸುಲ್ತಾನನ ವಸ್ತ್ರವೇಶ್ಮ ಪ್ರವೇಶಿಸಿ, ಸುಲ್ತಾನನ ಬಾಯಿಕಟ್ಟಿ, ತನ್ನ ಸೊಂಟದಲ್ಲಿದ್ದ ಬಾಕನ್ನೆತ್ತಿ ಅವನ ಹೃದಯಕ್ಕೆ ನೆಟ್ಟುಬಿಟ್ಟ. ಮರುಕ್ಷಣವೇ ದಾವೂದ್‌ಖಾನನ ಸಿಪಾಯಿಗಳು ವಾಹಿದ್‌ಖಾನನನ್ನು ಸೆರೆ ಹಿಡಿದರು.

ದಾವೂದ್‌ಖಾನ್ ರಾಜಧಾನಿ ತಲುಪಿದೊಡನೆಯೇ ಗಾದಿಯನ್ನೇರಿ, ತಾನೇ ಸುಲ್ತಾನನೆಂದು ಸಾರಿಕೊಂಡ.

ಚಿತ್ರಹಿಂಸೆಗೊಳಗಾದ ವಾಹಿದ್‌ಖಾನ್ ಅನ್ನನೀರು ಕಾಣದೆ ಸೆರೆಮನೆಯಲ್ಲಿ ಪ್ರಾಣ ಒಪ್ಪಿಸಿದ.

ಸುಲ್ತಾನಗಿರಿಯ ಗಾದಿ ದಾವೂದ್‌ಖಾನನಿಗೆ ಮುಳ್ಳಿನ ಹಾಸಿಗೆಯಾಗಿತ್ತು. ರಾಜಮಹಲಿನಲ್ಲಿ ಯಾರು ಸ್ನೇಹಿತರೋ ಯಾರು ಶತ್ರುಗಳೋ ಎಂಬುದನ್ನು ತಿಳಿಯುವುದೇ ಅವನಿಗೆ ದುಸ್ಸಾಧ್ಯವಾಯಿತು.

ದಾವೂದ್‌ಖಾನನ ರಾಕ್ಷಸೀ ನಡೆವಳಿಕೆಗೆ ಬೇಸರಗೊಂಡಿದ್ದವರು ಗತಿಸಿದ ಸುಲ್ತಾನರ ಸೋದರಿ ರೂಪರವಾರ್ ಆಗ್ಹಾಜಾನಳ ಮರೆಹೊಕ್ಕರು.

ರೂಪರವಾರ್ ವಿರೋಧಶಕ್ತಿಗಳನ್ನೆಲ್ಲಾ ಒಂದುಗೂಡಿಸಿ, ದಾವೂದನ ಪರಿಸಮಾಪ್ತಿಗೆ ಸಂಚುನಡೆಸಿದ್ದಳು.

ಅಲ್ಲಾವುದ್ದೀನ್ ಹಸನ್ ಬಹಮನಿಯವರ ಮಕ್ಕಳಲ್ಲಿ ರೂಪರವಾರ್ ಬಹುಕುರೂಪಿಯೆಂದು ಹೆಸರಾಗಿದ್ದಳು. ಸುಲ್ತಾನರ ಮಗಳೆಂದು ತನ್ನನ್ನು ಯಾರಾದರೂ 'ಷಾದಿ' ಮಾಡಿಕೊಂಡರೂ ತನ್ನ ಜೀವನ ಸುಖಪ್ರದವಾಗುವುದಿಲ್ಲವೆಂದು ಅವಳಿಗೆ ಗೊತ್ತಿತ್ತು. ಸುಲ್ತಾನ್ ಅಲ್ಲಾವುದ್ದೀನರ ಮೆಚ್ಚಿನ ಮಗಳಾಗಿದ್ದ ರೂಪರವಾರ್ ಒಬ್ಬರಿಗೆ ಅಧೀನಳಾಗಿರುವುದು ದುಸ್ಸಾಧ್ಯವಾಗಿತ್ತು. ಚಾಣಾಕ್ಷಳಾದ ರೂಪರವಾರ್ 'ಷಾದಿ'ಯ ಗೋಜಿಗೇ ಬೀಳದೆ 'ಬೇಗಂ ಮಹಲಿ'ನ ಯಜಮಾನಿಕೆ ಮಾಡಿಕೊಂಡು ತೃಪ್ತಳಾಗಿದ್ದಳು.

ಒಂದು ದಿನ ರೂ, ರಾಜಮಹಲಿನ ಆವರಣದಲ್ಲಿ ಸಂಚರಿಸುತ್ತಿದ್ದಾಗ, ಕಾಪಿನ ಭಟನೊಬ್ಬನ ಮೇಲೆ ಅವಳ ಲಕ್ಷ್ಯ ಬಿದ್ದಿತು.

ತನ್ನ ಮೆಚ್ಚಿನ ದಾಸಿಯ ಮೂಲಕ ಅವನನ್ನು ಗುಪ್ತವಾಗಿ ತನ್ನ ಮಹಲಿಗೆ ಬರಮಾಡಿಕೊಂಡ ರೂಪರವಾರ್

"ನಿನ್ನ ಹೆಸರೇನು" ಎಂದು ಕೇಳಿದಳು.

"ಹಾಫೀಜ್ ಜಲಂಧರಿ."

"ಸುಲ್ತಾನರ ಸೇವೆಗೆ ನೀನು ಬಂದು ಎಷ್ಟು ದಿವಸಗಳಾದವು?"

"ಎರಡು ವರ್ಷದ ಮೇಲಾಯಿತು ಷಹಜಾದಿ ಸಾಹೀಬಾ."

"ನಿನಗೆ ಷಾದಿ ಆಗಿದೆಯೇ ಹಾಫೀಜ್?"

"ಇಲ್ಲ ಷಹಜಾದಿ. ಬರುವ ಸಂಬಳದಲ್ಲಿ ಷಾದಿ ಮಾಡಿಕೊಂಡು ಸಂಸಾರ ನಡೆಸುವುದು ಹೇಗೆ?"

"ಸಂಬಳ ಹೆಚ್ಚಾದರೆ ಷಾದಿ ಮಾಡಿಕೊಳ್ಳುವೆಯಾ?"

"ಮಾಡಿಕೊಳ್ಳುತ್ತೇನೆ."

"ಸಂಬಳ ಹೆಚ್ಚುಮಾಡಿಸುತ್ತೇನೆ – ಷಾದಿ ಮಾಡಿಕೊಳ್ಳಬೇಡ."

"ಏಕೆ. ಷಹಜಾದಿ?"

"ನನ್ನ ಸೇವೆ ಮಾಡಿಕೊಂಡಿರುವೆಯಂತೆ!"

ಷಹಜಾದಿಯ ಇಂಗಿತವನ್ನರಿತ ಹಾಫೀಜ್ ಮರುಮಾತಾಡಲಿಲ್ಲ.

ಅದೇ ರಾತ್ರಿ ರೂ ಪರವಾರ್, ಹಾಫೀಜನನ್ನು ಬರಮಾಡಿಕೊಂಡು, ಅವನೊಂದಿಗೆ ಸಖ್ಯ ಬೆಳಸಿದಳು.

ಹಾಫೀಜ್ ಮತ್ತು ರೂ ಪರವಾರರ ಸಂಬಂಧ ರಾಜಮಹಲಿನ ನಿವಾಸಿಗಳಿಗೆ ತಿಳಿದುಬರಲು ತಡವಾಗಲಿಲ್ಲ.

ಆದರೆ ರೂ ವಿರುದ್ಧ ಮಾತಾಡಲು ಯಾರಿಗೂ ಧೈರ್ಯವಿರಲಿಲ್ಲ.

ನಿತ್ಯಕ್ರಮದಂತೆ ರೂ ಪರವಾರಳ ಶಯ್ಯಾಗೃಹಕ್ಕೆ ಬಂದ ಹಾಫೀಜ್ ಜಲಂಧರಿಯ ಭುಜದಮೇಲೆ ಕೈಯಿಟ್ಟು

"ಹಾಫೀಜ್, ನಾನು ನಿನ್ನ ವಿಷಯದಲ್ಲಿ ಸತ್ಯವಾಗಿ ನಡೆದುಕೊಂಡಿದ್ದೇನೋ ಇಲ್ಲವೋ ?"

"ನಿಮ್ಮ ವಿಷಯದಲ್ಲಿ ನಾನು ಚಕಾರ ಶಬ್ದವೆತ್ತಿದ್ದೇನೆಯೇಷಹಜಾದಿ."

"ಇಲ್ಲ ಸರಿ – ನನ್ನ ವಿಶ್ವಾಸಕ್ಕೆ ನಾನು ಪ್ರತಿವಿಶ್ವಾಸ ನಿರೀಕ್ಷಿಸುತ್ತೇನೆ."

"ನಿಮ್ಮನ್ನಲ್ಲದೆ ಬೇರೆ ಯಾರನ್ನೂ ನಾನು ಕಣ್ಣೆತ್ತಿಯೂ ನೋಡಿಲ್ಲ ಷಹಜಾದಿ."

"ಅದನ್ನು ನಾನು ಬಲ್ಲೆ - ನೀನು ನನಗೆ ವಂಚನೆ ಮಾಡಿದ ದಿನವೇ ನಿನ್ನನ್ನು........"

"ನಿಮ್ಮ ಮನಸ್ಸಿನಲ್ಲಿ ಏನಿದೆ ಹೇಳಿ."

"ಅಣ್ಣ ಮುಜಾಹಿದನನ್ನು ದಾವೂದ್ ಕಗ್ಗೊಲೆ ಮಾಡಿಸಿದ."

"ಹೌದು – ದಾವೂದ್ ಖಾನ್ ಇಂಥ ನೀಚನೆಂದು ನಾನು ಭಾವಿಸಿರಲಿಲ್ಲ."

"ಬಹಮನಿ ಸುಲ್ತಾನ್‌ಶಾಹಿಯ ನಿಜವಾದ ಉತ್ತರಾಧಿಕಾರಿಗಳು ಯಾರು ?"

"ಷರ್ಹಾ ಮುಜಾಹಿದರ ತರುವಾಯ ನೀವು ಗಾದಿಗೆ ಬರಬೇಕು ನಿಮ್ಮ ತರುವಾಯ ಷಹಜಾದಾ ಮಹಮುದರು ಗಾದಿಗೆ ಬರಬೇಕು."

"ನನಗೆ ರಾಜ್ಯವಾಳಬೇಕೆಂಬ ಹಂಬಲವಿಲ್ಲ. ನನ್ನ ತಮ್ಮ ಮಹಮದ್ ಪಟ್ಟಕ್ಕೆ ಬಂದರೆ ಸಾಕು."

"ದಾವೂದ್ ಅವಕಾಶಕೊಡಬೇಕಲ್ಲ, ಅವನ ತರುವಾಯ ಗಾದಿ ಅವನ ಎಂಟು ವರ್ಷದ ಮಗ ಇನಾಯತ್‌ಗೆ ಹೋಗುತ್ತದೆ.

"ಇನಾಯತನನ್ನು ನಾನು ವಿಚಾರಿಸಿಕೊಳ್ಳುತ್ತೇನೆ - ನೀನು ದಾವೂದನನ್ನು ವಿಚಾರಿಸಿಕೊಳ್ಳಬೇಕು."

"..................."

"ನಿನ್ನಲ್ಲಿ ಸ್ವಾಮಿಭಕ್ತಿಯಿದ್ದರೆ, ನನ್ನ ಮೇಲೆ ವಿಶ್ವಾಸವಿದ್ದರೆ ಈ ಕೆಲಸ ನಿರ್ವಹಿಸುತ್ತೀ."

"ಏಕಾಂಗಿಯಾಗಿ ದಾವೂದನನ್ನು ಕೊಲ್ಲುವುದು ದುಸ್ಸಾಧ್ಯ. ಭಯ ಗ್ರಸ್ತನಾದ ದಾವೂದ್ ಸಾಕಷ್ಟು ರಕ್ಷಣೆಯಿಲ್ಲದೆ ಹೊರಗೇ ಕಾಲಿಡುವುದಿಲ್ಲ."

"ಅದನ್ನು ನಾನೂ ಬಲ್ಲೆ. ರಕ್ಷಣೆಯಿಲ್ಲದೆ ಅವನು ಒಂದೆಡೆಗೆ ಹೋಗುತ್ತಾನೆ."

"ಎಲ್ಲಿಗೆ ?"

"ದೊಡ್ಡ ಮಸೀದಿಗೆ."

"ಜುಮ್ಮಾಕ್ಕೆ ಕುಳಿತಿರುವವನನ್ನು........"

"ಮಲಗಿದ್ದ ಸುಲ್ತಾನರನ್ನು ಅರ್ಧರಾತ್ರಿಯಲ್ಲಿ ಸಂಹರಿಸಿದ ಸೈತಾನನಿಗೆ ಮರುಕದೋರುವುದೇ ?"

"ಸಾರ್ವಜನಿಕರೆದುರು – ಮಸೀದಿಯಲ್ಲಿ ನಾನವನನ್ನು ಕೊಂದರೆ ಜನ ಸುಮ್ಮನಿರುತ್ತಾರೆಯೇ ?"

"ನಾಳೆ ಮಸೀದಿಯ ತುಂಬ ನಮ್ಮ ಜನವಿರುವಂತೆ ವ್ಯವಸ್ಥೆ ಮಾಡುತ್ತೇನೆ. ದಾವೂದ್ ಸತ್ತರೆ ಅಳುವವರು ಯಾರೂ ಇಲ್ಲ. ಪ್ರತಿರೋಧವೆದ್ದೀತೆಂದು ನೀನು ಶಂಕಿಸಬೇಕಾದದ್ದಿಲ್ಲ. ಮಸೀದಿಯಲ್ಲಿ ದಾವೂದನನ್ನು ನೀನು ಮುಗಿಸಿದಕೂಡಲೆ, ಪ್ರಜಾವರ್ಗಕ್ಕೆ ನಾನು ಮಹಮದನನ್ನು ತೋರಿಸಿ 'ನಿಮ್ಮ ನಿಜವಾದ ಸುಲ್ತಾನ ಇಲ್ಲಿದ್ದಾನೆ ನೋಡಿ' ಎಂದು ಹೇಳುತ್ತೇನೆ."

ಅನುಮಾನಗ್ರಸ್ತನಾಗಿದ್ದ ಹಾಫೀಜ್

"ನಾಳೆಯೇ ಈ ಕೆಲಸವಾಗಬೇಕೇ ಷಹಜಾದಿ ಎಂದು ಕೇಳಿದ."

"ನಾಳೆ ಶುಕ್ರವಾರ – ದಾವೂದ್ ಜುಮ್ಮಾಕ್ಕೆ ದೊಡ್ಡ ಮಸೀದಿಗೆ ಹೋಗೇ ಹೋಗುತ್ತಾನೆ."

"ಆಗಲಿ ರೂ."

"ಆಗಲಿ ಎಂದರೆ ಸಾಲದು. ಪವಿತ್ರ ಕುರಾನಿನಮೇಲೆ ಕೈಯಿಟ್ಟು ಪ್ರಮಾಣಮಾಡು"

ಎಂದು ಮೇಜಿನಮೇಲಿದ್ದ ತನ್ನ ಕುರ್ರಾ ತಂದು ಅವನ ಕೈಯಲ್ಲಿಟ್ಟಳು.

ಹಾಫೀಜ್, ಕುರ್ರಾ್ ಕೈಯಲ್ಲಿ ಹಿಡಿದು "ನಾಳೆ ದಾವೂದ್‌ಖಾನನನ್ನು ಮುಗಿಸಿಬಿಡುತ್ತೇನೆಂದು ಅಲ್ಲಾ ಆಣೆಗೂ ಪ್ರಮಾಣ ಮಾಡುತ್ತೇನೆ" ಎಂದ.

ರೂ ಅವನನ್ನಪ್ಪಿ

"ಬಾ – ನನ್ನ ಹೃದಯದ ಸುಲ್ತಾನ್. ನಿನ್ನ ರೂ ಬೇಕಾದ ಸೇವೆ ಮಾಡಲು ಸಿದ್ಧಳಾಗಿದ್ದಾಳೆ" ಎಂದಳು.

## ೨೪

ದೊಡ್ಡ ಮಸೀದಿಯಲ್ಲಿ ಪ್ರಾರ್ಥನೆಗಾಗಿ ಸೇರುತ್ತಿದ್ದ ಭಕ್ತರಲ್ಲಿ ಯಾವ ವ್ಯತ್ಯಾಸವನ್ನೂ ಮಾಡಲಾಗುತ್ತಿರಲಿಲ್ಲ. ಬೀದಿಯ ಭಿಕ್ಷುಕ, ರಾಜ್ಯದ ಹಿರಿಯ ಸರದಾರನ ಪಕ್ಕದಲ್ಲೇ ಕುಳಿತು ಪ್ರಾರ್ಥನೆ ಸಲ್ಲಿಸಬಹುದಾಗಿತ್ತು.

ಸುಲ್ತಾನರೂ ಸಾಮಾನ್ಯ ಜನರೊಂದಿಗೆ ಕುಳಿತು ಪ್ರಾರ್ಥನೆ ಸಲ್ಲಿಸುವುದೇ ವಾಡಿಕೆಯಾಗಿತ್ತು. ಆದರೆ ಮೊದಲನೆಯ ಪಂಕ್ತಿ ಸುಲ್ತಾನರಿಗೆ ಮೀಸಲಾಗಿರುತ್ತಿತ್ತು. ಉಳಿದವರು ಆ ಪಂಕ್ತಿಯಲ್ಲಿ ಕೂಡುತ್ತಿರಲಿಲ್ಲ.

ಶುಕ್ರವಾರದ ಜುಮ್ಮಾಕ್ಕೆ ದೊಡ್ಡ ಮಸೀದಿ ತುಂಬಿರುತ್ತಿತ್ತು. ಸುಲ್ತಾನರು ಆಗಮಿಸುವ ಮೊದಲೇ ಮಸೀದಿಗೆ ಬಂದಿದ್ದ ಹಾಫೀಜ್, ಅವರ ಹಿಂದಣ ಸ್ಥಾನವನ್ನು ಭದ್ರಪಡಿಸಿಕೊಂಡಿದ್ದ. ಅವನ ಅಕ್ಕಪಕ್ಕಗಳಲ್ಲಿ ರೂ ಪರವಾರಳ ನಂಬಿಕೆಗೆ ಪಾತ್ರರಾದವರು ಪೀಠಸ್ಥರಾಗಿದ್ದರು.

ಸುಲ್ತಾನ್ ದಾವೂದ್‌ಖಾನರು ಬಂದೊಡನೆಯೇ ಜುಮ್ಮಾ ಆರಂಭವಾಯಿತು.

ಮಸೀದಿಯ ಇಮಾಂಸಾಹೇಬರು ಉಪದೇಶ ಆರಂಭಿಸಿದರು. ಅವರ ಉಜ್ಜ್ವಲನುಡಿಗಳನ್ನು ಶ್ರೋತೃಗಳು ಕೇಳುತ್ತ ಕುಳಿತಿದ್ದಂತೆ ಯಾರೋ

"ಯಾ ಅಲ್ಲಾ – ಯಾ ಪರವರ್ದಿಗಾರ್."

ಎಂದು ಚೀರಿದರು.

ಪ್ರಶಾಂತವಾಗಿದ್ದ ವಾತಾವರಣ ಕ್ಷಣಾರ್ಧದಲ್ಲಿಅಲ್ಲಕಲ್ಲೋಲವಾಯಿತು.

ಜನ ಸುಲ್ತಾನರ ಬಳಿ ಬರುವಷ್ಟರಲ್ಲಿ ಹಾಫೀಜನ ಅಕ್ಕಪಕ್ಕದಲ್ಲಿದ್ದವರು ಅವನನ್ನು ಸುತ್ತುಗಟ್ಟಿ, ಮೆಲ್ಲನೆ ಅವನನ್ನು ಪಾರುಮಾಡಿದರು.

ದಾವೂದ್ ಖಾನ್ ಕೊಲೆಯಾದ ಸುದ್ದಿ ಊರಿನಲ್ಲಿ ಹರಡಲು ತಡವಾಗಲಿಲ್ಲ. ಜನ ತಂಡೋಪತಂಡವಾಗಿ ರಾಜಮಹಲಿನತ್ತ ಸಾಗಿದರು.

ಸುಲ್ತಾನರ 'ದರ್ಶನ ಕಿಟಕಿ'ಯ ತೆರೆ ಎಳೆಯಲ್ಪಟ್ಟಿತು.

ರೂ ಪರವಾರ್ ಷಹಜಾದನನ್ನೆತ್ತಿ ಎಲ್ಲರಿಗೂ ತೋರಿಸುತ್ತಾ

"ನಿಮ್ಮ ನಿಜವಾದ ಸುಲ್ತಾನ ಇಲ್ಲಿದ್ದಾನೆ ನೋಡಿ"

ಎಂದು ಕೂಗಿದಳು.

ಷಹಜಾದಾ ಮಹಮುದ್ ಎರಡು ಕೈಗಳನ್ನೆತ್ತಿ ಜನರಿಗೆ ಸಲಾಂಮಾಡಿದ.

ಜನ ಉತ್ಸಾಹಗೊಂಡು,

'ಷಹನ್‌ಷಾ ಮಹಮುದ್ ಜಿಂದಾಬಾದ್'

ಎಂದು ಘೋಷಿಸಿದರು.

ಎಳೆಯ ಸುಲ್ತಾನನ ಅಂಗರಕ್ಷಕ ದಳದ ನಾಯಕತ್ವ ಹಾಫೀಜ್ ಜಲಂಧರಿಗೆ ವಹಿಸಲ್ಪಟ್ಟಿತು. ಹಾಫೀಜ್, ಕಾಪಿನ ಭಟರ ಸಿಲ್ದಾಣಬಿಟ್ಟು ರಾಜಮಹಲಿನಲ್ಲಿಯೇ ವಾಸಿಸಲು ಬಂದ.

ಮುಜಾಹಿದ್ ಮತ್ತು ದಾವೂದ್ ಮೂಲೆಗೊತ್ತರಿಸಿದ್ದ ಸಂಸ್ಥಾನದ ಸರದಾರರನ್ನೂ, ಸ್ವಾಮಿಭಕ್ತ ನಗರ ಪ್ರಮುಖರನ್ನೂ ಬರಮಾಡಿಕೊಂಡು ರೂ ಪರವಾರ್

"ಒಂದೇ ಸಮನೆ ಯುದ್ಧದಲ್ಲಿ ತೊಡಗಿ ನಾವು ಹಣ್ಣಾಗಿದ್ದೇವೆ. ರಾಜ್ಯದ ಒಳಾಡಳಿತ ಕುಸಿದುಬಿದ್ದಿದೆ. ನಮ್ಮ ಆರ್ಥಿಕ ಸ್ಥಿತಿ ಪರಮಶೋಚನೀಯಾವಸ್ಥೆಯಲ್ಲಿದೆ. ಅಪ್ರಬುದ್ಧರಾದ ಸುಲ್ತಾನರಿಗೆ ನೀವೆಲ್ಲರೂ ನೆರವಾಗಿ ರಾಜ್ಯಾಡಳಿತವನ್ನು ಭದ್ರಪಡಿಸದಿದ್ದರೆ, ವಿಜಯನಗರದವರು ತಮ್ಮನ್ನು ನುಚ್ಚುನೂರಾಗಿಸಿ ಬಿಡುತ್ತಾರೆ. ಎಳೆಯ ಸುಲ್ತಾನರು ವಯಸ್ಸಿಗೆ ಬರುವವರೆಗೆ ನಾವು ಯುದ್ಧಗಳ ಗೋಜಿಗೆ ಹೋಗಬಾರದು – ಆವರೆಗೆ ದಕ್ಷತೆಯಿಂದ ರಾಜ್ಯಾಡಳಿತ ನಿರ್ವಹಿಸಲು ಒಬ್ಬ ರಾಜಪ್ರತಿನಿಧಿಯನ್ನು ನೇಮುಕವಾಡಬೇಕು."

"ವಿಜಯನಗರದವರೇ ಕಾಲುಕೆರೆದುಕೊಂಡು ಜಗಳಕ್ಕೆ ಬಂದರೆ ನಾವೇನು ಮಾಡುವುದು ಷಹಜಾದಿ."

" ನಮಗೆ ಬಂದಿರುವ ಬಾತ್ಮಿ ನಿಜವಾದರೆ ವಿಜಯನಗರದವರಿಗೆ ಯುದ್ಧ ಬೇಕಿಲ್ಲವಂತೆ. ಅವರೂ ನೂರಾರು ಯೋಜನೆಗಳನ್ನು ಹೂಡಿಕೊಂಡು ಕುಳಿತಿದ್ದಾರೆ. ತುಂಗಾಭದ್ರಾ ನದಿಗೆ ದೊಡ್ಡ ಅಣೆಕಟ್ಟು ನಿರ್ಮಾಣವಾಗುತ್ತಿದೆಯಂತೆ. ಈ ಸಂಧಿಕಾಲವನ್ನುಪಯೋಗಿಸಿಕೊಂಡು ನಾವು ರಾಜ್ಯ ಸುವ್ಯವಸ್ಥಿತವಾಗುವಂತೆ ಮಾಡಬೇಕು – ನೀವೆಲ್ಲರೂ ಒಮ್ಮತದಿಂದ ಚುನಾಯಿಸುವ ರಾಜ ಪ್ರತಿನಿಧಿಯನ್ನು ಅಂಗೀಕರಿಸಲು ನಾನು ಸುಲ್ತಾನರಿಗೆ ಬಿನ್ನವಿಸಿಕೊಳ್ಳುತ್ತೇನೆ."

ಸರ್ದಾರರು ತಮ್ಮ ತಮ್ಮಲ್ಲಿಯೇ ಯೋಚಿಸಿ

" ನಾವು ಸೂಚಿಸುವ ಹೆಸರನ್ನು ನೀವು ಒಪ್ಪಿಕೊಳ್ಳಬೇಕು ಷಹಜಾದಿ."

" ಆಗಬಹುದು."

" ನೀವೇ ವಕೀಲ್ ಅಸ್ ಸಲ್ತಾನಾ ಆಗಿರಬೇಕೆಂದು ನಮ್ಮೆಲ್ಲರ ಇಚ್ಛೆ "

" ನಿಮ್ಮೆಲ್ಲರ ಇಚ್ಛೆ ಹಾಗಿದ್ದರೆ ಆಗಬಹುದು." ಎಂದಳು.

ರಾತ್ರಿ ಶಯ್ಯಾಗೃಹಕ್ಕೆ ಬಂದ ಹಾಫೀಜನಿಗೆ ಹಾರ್ದಿಕ ಸ್ವಾಗತ ಬಯಸುತ್ತಾ ರೂ ಪರವಾರ್, ಅವನ ತೋಳತೆಕ್ಕೆಯಲ್ಲಡಗಿ,

" ಇವತ್ತಿನ ಸಭೆ ಹೇಗಾಯಿತು ಹಾಫೀಜ್ " ಎಂದಳು.

" ನೀನು ಪ್ರಣಯಪ್ರವೀಣೆಯಾಗಿರುವಂತೆ, ರಾಜ್ಯಕಾರಣಪ್ರವೀಣೆಯೂ ಆಗಿದ್ದೀ ರೂ. ಸಂಸ್ಥಾನದ ಸರ್ದಾರರೆಲ್ಲಾ ಬಾಗಿ ಬಾಗಿ ನಿನಗೆ ಸಲಾಮು ಹೊಡೆಯುತ್ತಿದ್ದಾರೆ."

" ಅವರ ಅಭಿಪ್ರಾಯ ತಿಳಿಯುವವರೆಗೆ ನನ್ನ ಎದೆ ಡವಡವ ಗುಟ್ಟುತ್ತಿತ್ತು."

" ಏಕೆ ?"

" ನಮ್ಮ ಪ್ರಣಯಕಥೆ ಎಲ್ಲಿ ಬಯಲಿಗೆ ಬರುವುದೋ ಎಂದು."

" ರೂ – ಅವರಿಗೆಲ್ಲಾ ನಮ್ಮ ಪ್ರಣಯಕಥೆ ಗೊತ್ತಿಲ್ಲವೆಂದು ಭಾವಿಸಿರುವೆಯಾ ?"

" ಗೊತ್ತಿದೆಯೇ ?"

" ಗೊತ್ತಿದೆ."

" ಗೊತ್ತಿದ್ದೂ ಅವರು ಸುಮ್ಮನಿದ್ದಾರೆಯೇ ?"

" ನೀನು ಅವರ ಆರಾಧ್ಯಮೂರ್ತಿ-ಸುಲ್ತಾನ್ ಮಹಮದರ ಮಗಳು-ರಾಜ್ಯಸೇವಾದುರಂಧರಳು."

" ದೇಶದ ಶಾಂತಿಗೆ ಭಂಗಬರದಂತೆ ನೋಡಿಕೊಂಡು, ಸಂಸ್ಥಾನದ ಆರ್ಥಿಕಸ್ಥಿತಿ ಸುಧಾರಿಸಬೇಕು ಹಾಫೀಜ್. ವಾಹಿದ್ ಖಾನ್, ಅವನ ತರುವಾಯ ದಾವೂದ್ ರಾಕ್ಷಸರ ಬಳಗ ಸೃಷ್ಟಿಮಾಡಿದ್ದಾರೆ - ಇವರು ಬಡಜನರನ್ನು ಕಿತ್ತು ಸುಲಿದು ತಿನ್ನುತ್ತಿದ್ದಾರೆ. ವಿನಾಕಾರಣ ಹಿಂದುಗಳನ್ನು ದ್ವೇಷಿಸಿ ಅವರ ಗುಡಿಗೋಪುರಗಳನ್ನು ನಾಶಮಾಡುತ್ತಿದ್ದಾರೆ. ಹಿಂದುಗಳ ಒಲವನ್ನೂ ನಾವು ದೊರಕಿಸಿಕೊಳ್ಳಬೇಕು. ವಾಹಿದ್ ಖಾನನ ದಬ್ಬಾಳಿಕೆ ಸಹಿಸಲಾಗದೆ ಕಲ್ಬುರ್ಗಿ ಬಿಟ್ಟು ಹೋದವರನ್ನೆಲ್ಲಾ ಹಿಂದಕ್ಕೆ ಬರಮಾಡಿಕೊಂಡು, ಅವರಿಗೆ ಅನ್ನ, ವಸತಿ ಸೌಕರ್ಯ ಕಲ್ಪಿಸಿಕೊಡಬೇಕು. ಅಣ್ಣ ಮಹಮದರ ಸ್ನೇಹಿತ ವಾಲಿ ಮಹಮದ್ ಈ ವಿಷಯದಲ್ಲಿ ನಿಶ್ಚಿತ ಧೋರಣೆ ತಳೆದಿದ್ದ. ದಡ್ಡ ಮುಜಾಹಿದ್ ಅವನನ್ನು ರಾಜ್ಯ ಬಿಟ್ಟು ಓಡಿಸಿದ - ವಾಲಿ ಎಲ್ಲಿದ್ದಾನೆ ಹುಡುಕಿಸು. ವಿಜಯನಗರದರಸರು, ಮಂತ್ರಿಗಳು, ಜನರು ವಾಲಿಯ ಬಗ್ಗೆ ಬಹಳ ಗೌರವ ತಾಳಿರುವರಂತೆ. ವಾಲಿ ನಮ್ಮೊಂದಿಗಿದ್ದರೆ, ನಮ್ಮ ರಾಜ್ಯ ನಿಷ್ಕಂಟಕವಾಗುತ್ತದೆ."

" ವಾಲಿ ಮಹಮದರು ಫಕೀರರಂತೆ ವೇಷ ಹಾಕಿಕೊಂಡು ಹಜ್ ಯಾತ್ರೆ ಹೋದರೆಂದು ಕೇಳಿದೆ:"

" ನಂಬಿಗಸ್ಥರಾದ ದೂತರನ್ನು ಹಜ್‌ಗೆ ಕಳಿಸಿಕೊಟ್ಟು, ವಾಲಿಯನ್ನು ಬರಮಾಡು." ಎಂದಳು.

ಹಾಫೀಜ್ ಆಗಲೆಂದು ಒಪ್ಪಿಕೊಂಡ.

## ೨೫

ಪಡವೀಡು ದುರ್ಗವನ್ನಾಶ್ರಯಿಸಿದ್ದ ವನ್ಯರಾಯ ಸಂಭವರಾಯ ನೆರೆಹೊರೆಯವರಿಗೆಲ್ಲಾ ವಿಪರೀತ ಕಿರುಕುಳ ಕೊಡುತ್ತಿದ್ದುದಲ್ಲದೆ ವಿಜಯನಗರಕ್ಕೆ ವಿರೋಧವಾಗಿ ವರ್ತಿಸುತ್ತಿದ್ದ. ಲೋಕಹಿತ ದೃಷ್ಟಿಯಿಂದ ಹಾಗೂ ವಿಜಯ

ನಗರದ ಗೌರವದೃಷ್ಟಿಯಿಂದ ಅವನನ್ನು ಹತ್ತಿಕ್ಕುವುದು ಅನಿವಾರ್ಯವಾಯಿತು.

ವೀರವೀಳೆಯ ತೆಗೆದುಕೊಂಡು ವಿಜಯನಗರದಿಂದ ಹೊರಟ ಕಂಪಣ್ಣ ನಾಯಕರು ಪಡವೀಡು ದುರ್ಗದತ್ತ ಸೈನ್ಯಗಳನ್ನು ನಡೆಸಿದರು. ಸಂಧಿ ಗೊಪ್ಪದ ಸಂಭವರಾಯ ಯುದ್ಧಕ್ಕೆ ಸಿದ್ಧನಾದ. ವಿಜಯನಗರದ ಸುಶಿಕ್ಷಿತ ಪಡೆಗಳ ಮುಂದೆ ವನ್ಯರಾಜನ ಸೈನಿಕರು ನಿಲ್ಲದಾದರು. ಪಡವೀಡು ದುರ್ಗ ಕಂಪಣ್ಣ ನಾಯಕರ ಕೈಸೇರಿದುದಲ್ಲದೆ ಸಂಭವರಾಯ ಸೆರೆಸಿಕ್ಕಿದ.

ಆಪಾದಮಸ್ತಕ ಸಂಭವರಾಯನನ್ನು ಸರಪಣಿಗಳಿಂದ ಬಿಗಿದು, ಸೈನಿಕರು, ಅವನನ್ನು ಕರೆತಂದು ಕಂಪಣ್ಣನಾಯಕರ ಮುಂದೆ ನಿಲ್ಲಿಸಿದರು.

ಮದಿಸಿದ ವನ್ಯಮಾನವನನ್ನು ಕಂಡು ಕಂಪಣ್ಣನಾಯಕರಿಗೆ ಕರುಣೆ ಯುಂಟಾಯಿತು.

"ಸಂಭವರಾಯರೇ, ಪರಾಜಯಗೊಂಡ ಶತ್ರು ಕೈಗೆ ಸಿಕ್ಕಿದರೆ ನೀವೇನು ಮಾಡುವಿರಿ ?" ಎಂದು ಕೇಳಿದರು.

"ಚರ್ಮಸುಲಿಸಿ ಸುಡಿಸುತ್ತಿದ್ದೆ."

"ಈಗ ನಿಮ್ಮನ್ನೇನು ಮಾಡಬೇಕು."

"ನಿಮ್ಮ ಇಚ್ಛೆ ಬಂದಂತೆ ಮಾಡಬಹುದು."

"ಸೋತ ಶತ್ರುವನ್ನು ಕ್ಷಮಿಸಿ, ಅವನನ್ನು ಮಿತ್ರನನ್ನಾಗಿ ಮಾಡಿ ಕೊಳ್ಳುವುದು ನಮ್ಮ ರೂಢಿ."

"..............."

"ವಿಜಯನಗರದ ವಿರುದ್ಧ ಬಂಡಾಯ ಎಬ್ಬಿಸುವುದಿಲ್ಲವೆಂದು ನೀವು ಮಾತುಗೊಟ್ಟರೆ ನಿಮ್ಮನ್ನು ಕ್ಷಮಿಸಲು ಸಿದ್ಧನಾಗಿದ್ದೇನೆ. ವಿಜಯನಗರ ಕೇವಲ ಒಂದು ಹಿಂದೂರಾಜ್ಯವಲ್ಲ – ಅದು ಹಿಂದೂತ್ವದ ಪ್ರತೀಕವಾಗಿದೆ. ವಿಜಯನಗರ ಸಾಮ್ರಾಜ್ಯವಳಿದರೆ ಇಸ್ಲಾಮಿನ ಇದಿರೇಟನ್ನು ಎದುರಿಸು ವವರೇ ಇಲ್ಲವಾಗುತ್ತದೆ. ವಿಜಯನಗರ ಸಾಮ್ರಾಜ್ಯಕ್ಕೆ ನಿಮ್ಮ ರಾಜ್ಯ ಬೇಕಿಲ್ಲ – ನಿಮ್ಮ ರಾಜ್ಯವನ್ನು ನೀವೇ ಆಳಿಕೊಳ್ಳಬಹುದು. ಆದರೆ ಜನರಿಗೆ ಕಿರುಕುಳವಾಗದಂತೆ ಆಳಿಕೊಳ್ಳಬೇಕಷ್ಟೆ !"

ಎಂದು ಸೈನಿಕರಿಗೆ ಕಣ್ಸೂಚನೆ ಮಾಡಲು, ಅವರು ಸಂಭವರಾಯನ ಸರಪಣಿಗಳನ್ನು ಬಿಚ್ಚಿದರು.

ಕಂಪಣ್ಣನಾಯಕರ ಬಳಿ ಬಂದ ಸಂಭವರಾಯ, ಮೊಣಕಾಲೂರಿ ನಮಿಸಿ,

"ನಾಯಕರೇ, ನನ್ನ ಅಪರಾಧಗಳನ್ನು ಮನ್ನಿಸಿ ಕಾಪಾಡಿ. ಈ ಜೀವವಿರುವವರೆಗೆ ನಾನು ವಿಜಯನಗರದ ವಿರುದ್ಧ ಕೈಯೆತ್ತುವುದಿಲ್ಲ."

ಸುಪ್ರೀತರಾದ ಕಂಪಣ್ಣನಾಯಕರು ಸಂಭವರಾಯನ ರಾಜ್ಯವನ್ನು ಅವನಿಗೇ ಒಪ್ಪಿಸಿ, ಅವನನ್ನು ವಿಜಯನಗರದ ಮಾಂಡಲಿಕನನ್ನಾಗಿ ಮಾಡಿಕೊಂಡರು.

ಶ್ರೀರಂಗಂ, ಮಧುರೆ, ಚಿದಂಬರಂ ಮೊದಲಾದ ಪವಿತ್ರ ಕ್ಷೇತ್ರಗಳಲ್ಲಿ ಮುಸಲ್ಮಾನರು ನಡೆಸಿದ್ದ ಅತ್ಯಾಚಾರಗಳನ್ನು ಕೇಳಿದ್ದ ಕಂಪಣ್ಣನಾಯಕರು ತಮ್ಮ ದಂಡನಾಯಕ ಗೋಪಣಾರ್ಯರನ್ನು ಶ್ರೀರಂಗಕ್ಕೆ ಕಳಿಸಿಕೊಟ್ಟರು.

ಗೋಪಣಾರ್ಯನ ಬರುವನ್ನರಿತ ಶ್ರೀರಂಗದ ಮುಸ್ಲಿಮಧಿಕಾರಿ ಕೈಗೆ ಸಿಕ್ಕಿದ ಬೆಲೆಬಾಳುವ ವಸ್ತುಗಳನ್ನೆತ್ತಿಕೊಂಡು ಶ್ರೀರಂಗ ಬಿಟ್ಟು ಓಡಿಹೋದ. ಒಂದು ಹನಿ ರಕ್ತ ವ್ಯಯವಾಗದೆ ಶ್ರೀರಂಗ ಗೋಪಣಾರ್ಯರ ಕೈಸೇರಿತು. ಗೋಪಣಾರ್ಯರು, ತಿರುಪತಿಯಲ್ಲಿ ಅಜ್ಞಾತವಾಸದಲ್ಲಿ ಕಾಲ ಕಳೆಯುತ್ತಿದ್ದ ಶ್ರೀರಂಗನಾಥನ ಮೂರ್ತಿಯನ್ನು ತಂದು ಶ್ರೀರಂಗದಲ್ಲಿ ಪ್ರತಿಷ್ಠೆ ಮಾಡಿ, ನಾಯಕರನ್ನು ಸೇರಿಕೊಂಡರು.

ಅರವತ್ತು ವರ್ಷಗಳ ಕಾಲ ಮಧುರೆಯನ್ನಾಳಿದ ಸುಲ್ತಾನನ್ನು ಕಂಪಣ್ಣನಾಯಕರು ರಾಜ್ಯಚ್ಯುತರನ್ನಾಗಿಸಿ ಮಧುರೆಯನ್ನು ಕೈವಶಪಡಿಸಿಕೊಂಡು ವಿಜಯೋತ್ಸಾಹದಿಂದ ರಾಜಧಾನಿಗೆ ಹಿಂದಿರುಗಿದರು.

ವಿಕ್ರಮ, ರಾಜನೀತಿ ಕೌಶಲ್ಯಗಳೆರಡರಲ್ಲಿಯೂ ಮೇಲ್ಗೈಯಾಗಿ ಹಿಂದಿರುಗಿದ ಕಂಪಣ್ಣನಾಯಕರನ್ನು ಬುಕ್ಕರಾಯರು ಸ್ವಾಗತಿಸಿ ಅಪ್ಪಿಕೊಂಡರು. ನಾಯಕರ ಗೌರವಾರ್ಥವಾಗಿ ಒಂದು ವಾರ ಸತತವಾಗಿ ರಾಜಧಾನಿಯಲ್ಲಿ ಉತ್ಸವ ಏರ್ಪಟ್ಟಿತು.

ತಮ್ಮ ರಾಜ್ಯಕ್ಕೆ ಹೊರಟು ನಿಂತ ಕಂಪಣ್ಣನಾಯಕರು, ಶ್ರೀಗುರು ವಿದ್ಯಾರಣ್ಯರ ಅನುಜ್ಞೆ ಪಡೆಯಲು ಶ್ರೀವಾಸಸ್ಥಾನಕ್ಕೆ ಬಂದರು.

"ನಿಮ್ಮ ಉದಾರ ಚರಿತೆ ಕೇಳಿ ಆನಂದವಾಗಿದೆ ನಾಯಕರೇ. ಇಡಿಯ ದಕ್ಷಿಣ ದೇಶವನ್ನು ತುರುಷ್ಕರ ಹಾವಳಿಯಿಂದ ಪಾರುಮಾಡಿ ಮಹೋಪಕಾರ ಮಾಡಿರುವಿರಿ."

"ಎಲ್ಲವೂ ಶ್ರೀಗುರುದೇವರ ಆಶೀರ್ವಾದ. ನನ್ನ ರಾಜ್ಯ ಬಿಟ್ಟು ಬಹಳ ದಿವಸಗಳಾದವು. ಇಲ್ಲಿ ಹೆಚ್ಚು ಕಾಲ ನಿಲ್ಲುವಂತಿಲ್ಲ. ಶ್ರೀಗುರುಗಳ ಅಪ್ಪಣೆಯಾಗಬೇಕು."

" ಹೋಗಿ ಬನ್ನಿ. ಶ್ರೀಭುವನೇಶ್ವರಿ ನಿಮ್ಮನ್ನು ಸದಾ ರಕ್ಷಿಸಲಿ. ಆದಷ್ಟು ಬೇಗ ಶ್ರೀ ಸಾಯಣರನ್ನು ಇಲ್ಲಿಗೆ ಕಳಿಸಿಕೊಡಿ."

" ಸಾಯಣರು ಇನ್ನೂ ಕೆಲವುಕಾಲ ಅಲ್ಲೇ ಇರಬೇಕೆಂದು ನನ್ನ ಅಪೇಕ್ಷೆ."

" ಇನ್ನೊಮ್ಮೆ ಬರುತ್ತಾರೆ. ಈಗ ಅವರು ಇಲ್ಲಿ ಬರುವುದು ಅಗತ್ಯ ವಾಗಿದೆ. ನಮ್ಮ ಭಾಷ್ಯಗ್ರಂಥಗಳು, ಅಪೂರ್ಣವಾಗಿವೆ. ಮಹಾರಾಜರು ಸ್ಥಾಪಿಸಿರುವ 'ಗೀರ್ವಾಣ ವಿದ್ಯಾಪೀಠ' ಸಾಯಣರು ಬಂದಲ್ಲದೆ ಆರಂಭ ವಾಗುವಂತಿಲ್ಲ. ಆರ್ಯ ಕ್ಷೇಮೇಂದ್ರರೂ, ತ್ರಿಲೋಚನ ಭಟ್ಟಾಚಾರ್ಯರೂ ಇಲ್ಲಿಗೆ ಹೊರಟಿದ್ದಾರೆ"

" ಗುರ್ವಾಜ್ಞೆ "

ಎಂದು ಶ್ರೀಗುರುಗಳಿಗೆ ನಮಿಸಿ, ವಿಜಯನಗರ ಬಿಟ್ಟು ಹೊರಟರು.

ಕೂಡಲೆ ಕಂಪಣ್ಣನಾಯಕರು ಸಾಯಣರಿಂದ ರಾಜ್ಯವನ್ನು ಮರಳಿ ಪಡೆದು,

" ತಾವು ಕೂಡಲೆ ವಿಜಯನಗರಕ್ಕೆ ಹೋಗಬೇಕೆಂದು ಶ್ರೀಗುರುಗಳು ಇಚ್ಛಿಸುತ್ತಾರೆ." ಎಂದರು.

" ನಮ್ಮದೂ ಅದೇ ಇಚ್ಛೆಯಾಗಿದೆ ನಾಯಕರೇ. ನೀವು ಬರಲಿ ಎಂದು ಕಾದಿದ್ದೆವು. ಶ್ರೀಗುರು ವಿದ್ಯಾರಣ್ಯರೂ ನಾವೂ ಆರಂಭಿಸಿದ ವೇದ ಭಾಷ್ಯ ಅಪೂರ್ಣವಾಗಿದೆ – ಅದನ್ನು ಮುಗಿಸದಲ್ಲದೆ ಇಬ್ಬರ ಮನಸ್ಸಿಗೂ ಸಮಾಧಾನವಿಲ್ಲವಾಗಿದೆ."

" ತಾವು ಬೇಗ ಅನುಕೂಲಮಾಡಿಕೊಂಡು, ಇಲ್ಲಿಗೆ ಬರಬೇಕೆಂದು ದೈನ್ಯದಿಂದ ಪ್ರಾರ್ಥಿಸುತ್ತೇನೆ."

" ನಿಮ್ಮ ಮಮತೆಯ ಬಳ್ಳಿಯಿಂದ ನಮ್ಮನ್ನು ಬಿಗಿದು ಬಿಟ್ಟಿರುವಿರಿ. ಖಂಡಿತ ಬರುತ್ತೇವೆ."

ಎಂದು ಆಶ್ವಾಸನವಿತ್ತು, ರಾಜಮರ್ಯಾದೆಯೊಂದಿಗೆ ವಿಜಯನಗರ ಕುರಿತು ಪ್ರಯಾಣ ಬೆಳೆಸಿದರು.

ಸಾಯಣರು ಬಂದಕೂಡಲೆ 'ಗೀರ್ವಾಣ ವಿದ್ಯಾಪೀಠ' ಆರಂಭ ವಾಯಿತು. ಪಂಡಿತರಿಗಾಗಿಯೇ ನಿರ್ಮಾಣವಾಗಿದ್ದ ಅಗ್ರಹಾರದಲ್ಲಿ ಕ್ಷೇಮೇಂದ್ರರೂ, ಭಟ್ಟಾಚಾರ್ಯರೂ, ಭಾರತದ ವಿವಿಧ ಭಾಗಗಳಿಂದ ಬಂದಿದ್ದ ಮಹಾ ವಿದ್ವಾಂಸರು ನೆಲಸಿದರು.

ಸ್ವಯಂ ಬುಕ್ಕರಾಯರೇ ಗೀರ್ವಾಣ ವಿದ್ಯಾಪೀಠದಲ್ಲಿ ಆಸಕ್ತಿ ವಹಿಸಿದ್ದರು. ರಾಜಕಾರ್ಯ ಬಿಡುವಿತ್ತಾಗ ವಿದ್ಯಾಪೀಠಕ್ಕೆ ಬಂದು ಕುಳಿತು ಅಲ್ಲಿ ನಡೆಯುತ್ತಿದ್ದ ವಿದ್ವತ್ಪೂರ್ಣ ಚರ್ಚೆಗಳನ್ನು ಆಸ್ಥೆಯಿಂದ ಕೇಳುತ್ತಿದ್ದರು.

ರಾಯರ ಆಸ್ಥಾನ ಕವಿ, ಕಲಾವಿದ, ಪಂಡಿತರ ಪರಮಾಶ್ರಯಸ್ಥಾನ ವಾಗಿತ್ತು. ದೊರೆಗಳೇ ಕುಳಿತುಕೊಂಡು ಕಾವ್ಯಗಳನ್ನೋದಿಸಿ ಕೇಳಿ, ಸಂತೋಷಿಸಿ, ಕವಿಗಳಿಗೆ ಯೋಗ್ಯ ಸಂಭಾವನೆ ನೀಡುತ್ತಿದ್ದರು. ರಾಯರ ಆಸ್ಥಾನದಲ್ಲಿ ಬಸವ ಪುರಾಣ ಬರೆದ ಭೀಮಕವಿ, ಧರ್ಮನಾಥ ಪುರಾಣ ಬರೆದ ಬಾಹುಬಲಿ ಪಂಡಿತ, ಖಗೇಂದ್ರಮಣಿದರ್ಪಣ ಬರೆದ ಮಂಗರಾಜ ಗಣ್ಯರೆನಿಸಿಕೊಂಡಿದ್ದರು.

## ೨೬

ಒಂದು ದಿನ ವಕೀಲ್ ಅಸ್‌ಸಲ್ತಾನಾ ಷಹಜಾದಿ ರೂ ಪರವಾರ್ ರಾಜಮಹಲಿನ ಕಛೇರಿಯಲ್ಲಿ ಕುಳಿತು ಕಾಗದ ಪತ್ರಗಳನ್ನು ನೋಡುತ್ತಿದ್ದಳು. ಕಾಪಿನ ಭಟ ಬಂದು, ವಕೀಲ್ ಅಸ್ ಸಲ್ತಾನಾ ಅವರಿಗೆ ಸಲಾಮುಮಾಡಿ

"ಒಬ್ಬ ಫಕೀರ್ ಬಂದಿದ್ದಾನೆ. ತಮ್ಮನ್ನು ಈಗಲೇ ನೋಡಬೇಕೆಂದು ಒತ್ತಾಯ ಪಡಿಸುತ್ತಿದ್ದಾನೆ."

"ಅವನನ್ನು ಒಳಗೆ ಬರಮಾಡು."

ಫಕೀರನನ್ನು ಒಳಗೆ ಕರೆತಂದು ಬಿಟ್ಟು ಕಾಪಿನ ಭಟ ಹೊರಗೆ ಹೋದ.

ಫಕೀರ ತನ್ನ ನಿಲುವಂಗಿಯ ಕಿಸೆಯಲ್ಲಿದ್ದ ಒಂದು ಕಾಗದ ತೆಗೆದು ಷಹಜಾದಿಯ ಕೈಗಿತ್ತ. ಕಾಗದವನ್ನು ಗುರುತಿಸಿದ ರೂ ಪರವಾರ್

"ಸರ್ದಾರ್ ವಾಲಿ ಮಹಮದ್ ! – ಯಾವಾಗ ಬಂದಿರಿ ?"

"ಇದೇ ಬರುತ್ತಿದ್ದೇನೆ ಷಹಜಾದಿ."

"ಸುರೈಯ್ಯಾ, ಗುಲ್ ಹೇಗಿದ್ದಾರೆ."

“ ಚೆನ್ನಾಗಿದ್ದಾರೆ.”

“ ಅವರನ್ನು ಕರೆದುಕೊಂಡು ಬರಲಿಲ್ಲವೇ ?”

“ ಬನ್ನಿ ಎಂದು ಕರೆದೆ – ನಿಮ್ಮ ಪತ್ರವನ್ನೇ ಅವರಿಗೆ ತೋರಿಸಿದೆ. ಭಗವಂತನ ಸನ್ನಿಧಿಯಲ್ಲಿ ನಾವು ಸುಖವಾಗಿದ್ದೇವೆ – ರಾಜಧಾನಿಗೆ ಬಂದೇಕೆ ಒಣರಾಜಕಾರಣದ ಹವ್ಯಾಸಕ್ಕೆ ಬೀಳಬೇಕು ಎಂದರು.”

“ ಅವರೇ ಪುಣ್ಯಶಾಲಿಗಳು.”

“ ಹುಕುಂ ಆದಂತೆ ಬಂದಿದ್ದೇನೆ. ಏನು ಅಪ್ಪಣೆಯಾಗಬೇಕು.”

“ ಇಲ್ಲಿ ನಡೆದ ವಿದ್ಯಮಾನಗಳೆಲ್ಲಾ ನಿಮಗೆ ಗೊತ್ತಾಗಿದೆಯೇ ?”

“ ಗೊತ್ತಾಗಿದೆ. ತಮ್ಮ ಕಾಗದ ಬಂದ ದೂತರು ವಿವರಿಸಿದ್ದಾರೆ.”

“ ಷಹನಷಹಾ ಮಹಮದರು ವಯಸ್ಸಿನಲ್ಲಿ ಚಿಕ್ಕವರು – ಅವರಿಗೆ ನಿಮ್ಮಂಥ ಅರಿತ ನುರಿತ ರಾಜ್ಯಧುರಂಧರರ ನೆರವು ಬೇಕು.”

“ ನಾನು ಇಲ್ಲೇ ಇರಬೇಕೆಂದು ಅಪೇಕ್ಷಿಸುತ್ತಿರುವಿರಾ ಷಹಜಾದಿ ಸಾಹೇಬಾ.”

“ ಹೌದು – ವಿಜಯನಗರದೊಂದಿಗೆ ಸಖ್ಯ ಬೆಳಸಿಕೊಂಡಲ್ಲದೆ ಬಹಮನಿರಾಜ್ಯ ಉಳಿಯಲಾರದು. ಆ ಕೆಲಸ ನಿಮ್ಮಿಂದಲೇ ಸಾಧ್ಯವಾಗ ಬೇಕು. ನಮ್ಮವರು ಯಾರನ್ನೂ ವಿಜಯನಗರದವರು ನಂಬುವುದಿಲ್ಲ.”

“ ನನ್ನನ್ನು ನಂಬುತ್ತಾರೆಯೇ ?”

“ ನಂಬುತ್ತಾರೆ. ವಿಜಯನಗರದ ಸಮಸ್ತರೂ ತಮ್ಮ ವಿಷಯದಲ್ಲಿ ಗೌರವದಿಂದ ಇರುವ ವಿಷಯ ನಮಗೆ ಗೊತ್ತಿದೆ.”

ವಾಲಿ ಮಹಮದರ ಕಣ್ಣುಗಳಲ್ಲಿ ನೀರೂರಿದವು. ಆಕಾಶದತ್ತ ಮೊಗ ತಿರುಹಿ

“ ಖುದಾ – ಪರವರ್ದಿಗಾರ್ – ಇಂಥ ಸುದಿನ ಬರುವುದೇ ಎಂದು ನಾನು ಕಾಯುತ್ತಿದ್ದೆ. ಷಹಜಾದಿ ಸಾಹಿಬಾ – ನಿಮ್ಮ ದೂರದೃಷ್ಟಿಗೆ ಬಹಮನಿ, ವಿಜಯನಗರಗಳು ಮಾತ್ರವೇ ಅಲ್ಲ – ಇಡಿಯ ಭಾರತವೇ ಋಣಿ ಯಾಗಬೇಕಾಗಿದೆ. ತಮ್ಮ ಮನೆಯ ಉಪ್ಪುತಿಂದು ಬೆಳದವನು ನಾನು. ತಮ್ಮ ತೀರ್ಥರೂಪರು ನನ್ನನ್ನು ಮಗನಂತೆ ಕಾಣುತ್ತಿದ್ದರು. – ಅಲ್ಲಾ ಸಾನ್ನಿಧ್ಯ ಸೇರಿದ ತಮ್ಮ ಅಣ್ಣಂದಿರು – ನನ್ನ ಪ್ರಭು – ನನ್ನನ್ನು ಸೋದರನಂತೆ ಕಾಣುತ್ತಿದ್ದರು. ಓರುಗಲ್ಲಿನ ಕಾಳಗದಲ್ಲಿ ನನ್ನ ಕೈಗೆ ಪೆಟ್ಟುಬಿದ್ದಾಗ, ಗಾಯ

ಗಳನ್ನು ತೊಳೆದು ಔಷಧಿ ಹಚ್ಚಿದವರು ಸ್ವಯಂ ಸುಲ್ತಾನರು. ಬಹಮನಿ ಮನೆತನದ ಪುರೋಭಿವೃದ್ಧಿಗಾಗಿ ನಾನು ತನು, ಮನ, ಧನ ಅರ್ಪಿಸಲು ಸಿದ್ಧವಾಗಿದ್ದೇನೆ ಷಹಜಾದಿ ಸಾಹಿಬಾ."

ರೂ ಪರವಾರ್ ಪರಮ ಸಂತುಷ್ಟಳಾಗಿ, ವಾಲಿ ಮಹಮುದರ ಕೈಯಲ್ಲೇ ವಿಜಯನಗರಕ್ಕೆ ಪತ್ರ ಬರೆಸಿ, ಅವರ ಸ್ನೇಹ, ವಿಶ್ವಾಸಗಳನ್ನು ಬಯಸಿದಳು.

ವಾಲಿ ಮಹಮುದರ ಕಾಗದದ ಬಗ್ಗೆ ವಿಜಯನಗರದ ಮಂತ್ರಿಮಂಡಲ ದಲ್ಲಿ ಭಿನ್ನಾಭಿಪ್ರಾಯವೆದ್ದಿತು.

"ಇದು ಶತ್ರುಗಳ ಮೋಸ"

ಎಂದು ಮಲ್ಲಿನಾಥರು ಗುಡುಗಿದರು.

"ವಾಲಿ ಮಹಮುದ್ ಮೋಸಗಾರರಲ್ಲ. ಅವರಿಂದ ಬಂಧಿರುವ ಸ್ನೇಹ ಪೂರ್ಣವಾದ ಕಾಗದವನ್ನು ಪುರಸ್ಕರಿಸದಿದ್ದರೆ ನಾವು ದೋಷಿಗಳಾಗುತ್ತೇವೆ."

ಎಂದು ಮುದ್ದಪ್ಪನಾಯಕರು ನುಡಿದರು.

ಶ್ರೀಗುರು ವಿದ್ಯಾರಣ್ಯರಿಗೆ ಎಲ್ಲವನ್ನೂ ಅರಿಕೆಮಾಡಿಕೊಂಡು, ಅವರ ಸಲಹೆಯಂತೆ ನಡೆಯುವುದೆಂದು ಮಂತ್ರಿಮಂಡಲ ನಿಶ್ಚಯಿಸಿತು.

ಇಡಿಯ ಮಂತ್ರಿಮಂಡಲವೇ 'ಶ್ರೀವಾಸ'ಕ್ಕೆ ಬಂದುದನ್ನು ಕಂಡು ಗಾಬರಿಗೊಂಡ ಶ್ರೀಕಂಠ, ಗುರುಗಳಲ್ಲಿ ಹೋಗಿ ಸುದ್ದಿ ಮುಟ್ಟಿಸಿದ.

ಶ್ರೀಗುರುಗಳು ಕುಳಿತು ಸಾವಧಾನಚಿತ್ತರಾಗಿ ಪತ್ರವನ್ನು ಪರಾಮರ್ಶಿಸಿ, ಮಲ್ಲಿನಾಥರ ಆಕ್ಷೇಪಣೆಗಳೆಲ್ಲವನ್ನು ಲಾಲಿಸಿ,

"ವಾಲಿ ಮಹಮುದರು ತುಂಬಿದ ಜೀವ. ಆತ ಆತ್ಮಸಂಸ್ಕಾರ ಪಡೆದ ಸಿದ್ಧಪುರುಷ. ಲೌಕಿಕ ಈಪ್ಸಿತಗಳು ವಾಲಿ ಮಹಮುದರಿಗಿದ್ದಿದ್ದರೆ ಅವರು ದೇಶಾಂತರ ಹೋಗಬೇಕಾಗಿರಲಿಲ್ಲ. ಅವರು ಪತ್ರದಲ್ಲಿ ಸೂಚಿಸಿರುವಂತೆ ನಡೆಯುವುದು ನಮಗೆ ಶೋಭಾಯಮಾನ. ಕೆಲಕಾಲವಾದರೂ ಯುದ್ಧದ ಭೀತಿಯಿಲ್ಲದೆ ಉಭಯ ರಾಜ್ಯಗಳ ಪ್ರಜೆಗಳು ನಿರಾತಂಕವಾಗಿರಲಿ."

ಎಂದು ಕೊನೆಯ ತೀರ್ಪು ಹೇಳಿಬಿಟ್ಟರು.

ವಿಜಯನಗರದಿಂದ ಬಂದ ಸುಸ್ನೇಹಭರಿತ ಮಾರುತ್ತರ ನೋಡಿ ಆನಂದ ಪರವಶಳಾದ ರೂ ಪರವಾರ್, ವಾಲಿ ಮಹಮುದ್‌ರನ್ನು ಮನಸಾರೆ ಅಭಿನಂದಿಸಿದಳು.

ವಾಲಿ ಮುಹಮುದರಲ್ಲಿ ಅಗಾಧ ನಂಬಿಕೆ ತಳೆದಿದ್ದ ರೂ ಪರವಾರ್, ಅವರನ್ನು ಕೇಳದೆ ಯಾವ ಕಾಗದಕ್ಕೂ ಸಹಿ ಮಾಡುತ್ತಿರಲಿಲ್ಲ.

ವಾಲಿ ರಾಜ್ಯದ ಸಮಸ್ಯೆಗಳನ್ನು ಒಂದೊಂದನ್ನಾಗೆತ್ತಿಕೊಂಡು, ಅದರ ಲೋಪದೋಷಗಳನ್ನು ವಿಮರ್ಶಿಸಿ, ಸೂಕ್ತ ಕಾರ್ಯಕ್ರಮ ಕೈಗೊಳ್ಳುತ್ತಿದ್ದರು.

ಜನಪೀಡಕರು, ವಂಚಕರು, ಕಳ್ಳ ಮಾರಾಟಗಾರರು, ಲಾಭ ಬಡಕರು ವಾಲಿಯ ಹೆಸರು ಕೇಳಿದೊಡನೆಯೇ ತಲೆಮುರಸಿ ಕೊಳ್ಳಲಾರಂಭಿಸಿದರು.

ಒಂದೆರಡು ತಿಂಗಳಲ್ಲಿ ರಾಜ್ಯದ ಸ್ವರೂಪವೇ ಬದಲಾಯಿಸಿತು. ಜನ ನಿರ್ಭಯದಿಂದ ತಮ್ಮ ದೈನಂದಿನ ಚಟುವಟಿಕೆಗಳಲ್ಲಿ ಉದ್ಯುಕ್ತರಾಗಿದ್ದರು. ಎಲ್ಲರೂ ವಾಲಿ ಮುಹಮುದರನ್ನು ಹೊಗಳಿ ಹರಸುವವರೇ ಆದರು.

ಒಂದು ದೊಡ್ಡ ಚಿಂತೆ ವಾಲಿ ಮುಹಮುದರ ಮನಸ್ಸನ್ನು ಕೀಟದಂತೆ ಕೊರೆಯುತ್ತಿತ್ತು. ಅವರು ಚಿಂತಾಕ್ರಾಂತರಾಗಿದ್ದುದನ್ನು ಗಮನಿಸಿದ್ದ ರೂ ಪರವಾರ್ ನಾಲ್ಕಾರು ಬಾರಿ ಪ್ರಶ್ನಿಸಿಯೂ ಇದ್ದಳು. ವಾಲಿ ಮುಹಮುದ್ ನೇರವಾಗಿ ಉತ್ತರಿಸದೆ, ವಿಷಯಾಂತರ ಮಾಡಿಬಿಡುತ್ತಿದ್ದರು.

ಎಂದಿಗಿಂತ, ಒಂದು ದಿನ ವಾಲಿ ಮುಹಮುದರ ಮನಸ್ಸಿನ ಚಿಂತೆ ಪ್ರಬಲ ವಾಗಿತ್ತು. ಅವರು ವಿಮನಸ್ಕರಾಗಿದ್ದುದನ್ನು ಕಂಡ ಷಹಜಾದಿ, ಕಾಗದಗಳ ಕಟ್ಟನ್ನು ಒಂದೆಡೆಗೊತ್ತರಿಸಿ,

"ನಿಮ್ಮ ಚಿಂತೆಯ ಕಾರಣ ಹೇಳಿದಲ್ಲದೆ, ಮುಂದೆ ನಾನು ಕಾಗದ ನೋಡುವುದಿಲ್ಲ" ಎಂದಳು.

"ಅದೇನೂ ದೊಡ್ಡ ವಿಷಯವಲ್ಲ. ನೀವು ಮನಸ್ಸಿಗೆ ಖೇದವನ್ನುಂಟು ಮಾಡಿಕೊಳ್ಳಬೇಡಿ ಷಹಜಾದಿ ಸಾಹೇಬಾ."

"ನೀವು ದುಃಖಪಡುತ್ತಿರುವುದನ್ನು ನೋಡಿಕೊಂಡು ಸುಮ್ಮನಿರಲೇ."

"ನನ್ನ ದುಃಖ ನಿವಾರಿಸುವಿರಾ ?"

"ಖಸಂಸೆ !"

"ಆಣೆಮಾಡಬೇಡಿ – ವಿಷಯ ತಿಳಿದ ಮೇಲೆ ಕಷ್ಟವಾದೀತು."

"ಆಣೆಮಾಡಿಬಿಟ್ಟದ್ದೇನೆ. ಸುಲ್ತಾನ್ ಅಲ್ಲಾವುದ್ದೀನರ ಮಗಳು ಎಂದಿಗೂ ಮಾತಿಗೆ ತಪ್ಪುವುದಿಲ್ಲ.

"ನಾನು ಸ್ಪಷ್ಟವಾಗಿ ಮಾತನಾಡಲೇ ?"

"ಆಡಿ."

"ನಿಮ್ಮ–ಹಾಫೀಜ್ ಜಲಂಧರಿಯ ಸಂಬಂಧದ ಬಗ್ಗೆ ಹಲವು ಒಡಕು

ಶಬ್ದಗಳು ನನ್ನ ಕಿವಿಯ ಮೇಲೆ ಬಿದ್ದಿವೆ. ನಮ್ಮ ಷಹಜಾದಿಯ ಬಗ್ಗೆ ಇಂಥ ಹೀನನುಡಿಗಳನ್ನು ಕೇಳಲು ನಾನು ಸಿದ್ಧವಾಗಿಲ್ಲ."

"...................."

"ಏಕೆ ಮೌನ ತಳೆದಿರಿ ಷಹಜಾದಿ."

"ವಾಲಿ ಮಹಮುದ್, ಅಣ್ಣ ಮಹಮುದರಂತೆ ನೀವೂ ನನಗೆ ಅಣ್ಣಂದಿರು. ತಂಗಿಯ ನಿಜಜೀವನ ಚರಿತ್ರೆ ಕೇಳಿ ಬೇಸರಪಟ್ಟುಕೊಳ್ಳಬೇಡಿ. ನೀವು ಕ್ಷಮಾದಾನ ಕೊಡುವುದಾದರೆ ಹೇಳುತ್ತೇನೆ."

"ಷಹಜಾದಿ ನನ್ನಲ್ಲಿ ದಾನ ಬೇಡಬೇಕೇ – ಆಜ್ಞೆಮಾಡಿದರೆ ಸಾಲದೇ ? ಗುಲಾಮು ಶಿರಸಾವಹಿಸಿ ಪರಿಪಾಲಿಸುತ್ತಾನೆ."

ಷಹಜಾದಿ ಮುಖಮುಚ್ಚಿಕೊಂಡು ತನ್ನಪ್ರಣಯಕಥೆಯನ್ನು ಕೂಲಂಕಷ ವಾಗಿ ನಿರೂಪಿಸಿ, ವಾಲಿ ಮಹಮುದರ ಮುಖವನ್ನೇ ದಿಟ್ಟಿಸಿ ನೋಡಿದಳು.

ವಿಚಾರ ಪರರಾಗಿದ್ದ ವಾಲಿ

"ನಿಸರ್ಗದ ಕರೆ – ಏನು ಮಾಡಲಿಕ್ಕಾಗುತ್ತದೆ – ಆದರೆ ನೀವೀಗ ವಕೀಲ್ ಅಸ್ ಸಲ್ತಾನಾ – ನಿಮ್ಮ ನಡೆವಳಿಕೆ ದೋಷಾತೀತವಾಗಿರಬೇಕು. ಹಿರಿಯ ಸ್ಥಾನಗಳಲ್ಲಿರುವವರು ತಪ್ಪು ನುಡಿದರೆ, ತಪ್ಪು ನಡೆದರೆ ಉಳಿದವರು ಸ್ವೇಚ್ಛಾಚಾರಿಗಳಾಗುತ್ತಾರೆ."

"ನನ್ನ ತಪ್ಪನ್ನು ಸರಿಪಡಿಸುವುದು ಹೇಗೆ ?"

"ಸರಿಪಡಿಸಲು ನನಗೆ ಅನುಮತಿ ಕೊಡುವಿರಾ ?"

"ಭೇಷಕ್."

"ಹಾಫೀಜ್ ಜಲಂಧರಿಯನ್ನು 'ಷಾದಿ' ಮಾಡಿಕೊಂಡು ಬಿಡಿ. ಯಾರೂ ಚಕಾರ ಶಬ್ದವೆತ್ತುವಂತಿರುವುದಿಲ್ಲ."

"ಅವರು ಒಪ್ಪಬೇಕಲ್ಲ !"

"ಅವರನ್ನು ಒಪ್ಪಿಸುವ ಭಾರ ನನಗಿರಲಿ."

"ನಿಮ್ಮ ಮಾತು ಮೀರುವುದಿಲ್ಲವೆಂದೆ – ಮೀರುವುದಿಲ್ಲ. ನೀವು ಹೇಳಿದಂತೆ ಮಾಡಲು ಸಿದ್ಧಳಾಗಿದ್ದೇನೆ"

ಎಂದು ಷಹಜಾದಿ ಅಭಿವಚನವಿತ್ತಳು.

೨೭

ಪರಧರ್ಮಸಹಿಷ್ಣುತೆಗೆ ಹೆಸರಾಗಿದ್ದ ವಿಜಯನಗರದಲ್ಲಿ ಮತೀಯ ಕಲಹವೊಂದು ಆರಂಭವಾಗುವ ಚಿನ್ಹೆಗಳು ಕಂಡುಬಂದವು.

ಊರಿನ ಮಧ್ಯೆ ಅರಮನೆಗೆ ಸಮೀಪವಾಗಿ ಶ್ರೀವೈಷ್ಣವ ಸಂಪ್ರದಾಯದವರ ಒಂದು ಮಠವಿತ್ತು. ಅದರ ಅಕ್ಕಪಕ್ಕಗಳಲ್ಲಿ ವಾಸಿಸುತ್ತಿದ್ದವರು ಹೆಚ್ಚಾಗಿ ಜೈನರೇ ಆಗಿದ್ದರು. ಮಠಕ್ಕೆ ಸಮೀಪದಲ್ಲಿದ್ದ ಖಾಲಿ ನಿವೇಶನವನ್ನು ದೊರಕಿಸಿಕೊಂಡು ಗೋಪಾಲಕೃಷ್ಣಸ್ವಾಮಿಯ ದೇವಾಲಯ ಕಟ್ಟಿಸಬೇಕೆಂದು ಶ್ರೀವೈಷ್ಣವರು ಇಚ್ಛಿಸಿದರು. ಜೈನರೇ ಹೆಚ್ಚಾಗಿ ವಾಸವಾಗಿದ್ದ ಆ ಪ್ರದೇಶದಲ್ಲಿ ಆದಿನಾಥನ ಬಸದಿ ಕಟ್ಟಿಸಬೇಕೆಂದು ಜೈನರು ಯೋಚಿಸಿದರು.

ನಿವೇಶನದ ಬಗ್ಗೆ ಈ ಉಭಯ ಮತೀಯರಲ್ಲಿ ಭಿನ್ನಾಭಿಪ್ರಾಯವುಂಟಾಗಿ, ವಿಜಯನಗರವನ್ನೇ ವ್ಯಾಪಿಸುವಂತಾಯಿತು. ಕೆಲವರು ಶ್ರೀವೈಷ್ಣವರ ಪಕ್ಷಹಿಡಿದರು ; ಕೆಲವರು ಜೈನರ ಪಕ್ಷ ಹಿಡಿದರು. ಉಭಯ ಮತೀಯರಲ್ಲೂ ಸಣ್ಣಪುಟ್ಟ ಘರ್ಷಣೆಗಳಾದವು. ಈ ನಂಜಿನ ಕುಡಿಯನ್ನು ಬೆಳೆಯಬಿಡಬಾರದೆಂದು ನಿರ್ಧರಿಸಿದ ಶ್ರೀಬುಕ್ಕರಾಯರು ಉಭಯ ಕುಲದ ಹಿರಿಯರನ್ನೂ ಅರಮನೆಗೆ ಬರಮಾಡಿಕೊಂಡು, ಅವರಿಬ್ಬರ ವಾದವನ್ನೂ ಆಮೂಲಾಗ್ರವಾಗಿ ಕೇಳಿ

" ಒಂದು ತುಂಡು ಭೂಮಿಗಾಗಿ ನೀವಿಬ್ಬರೂ ಜಗಳವಾಡಿ, ಇಡಿಯ ವಿಜಯನಗರವನ್ನು ರಣಕುಂಡ ಮಾಡಲು ಸಿದ್ಧವಾಗಿರುವುದು ಶೋಚನೀಯವಾಗಿದೆ. ಇಡಿಯ ದಕ್ಷಿಣ ಹಿಂದೂಸ್ಥಾನವನ್ನೇ ವ್ಯಾಪಿಸಿರುವ ವಿಜಯನಗರ ಸಂಸ್ಥಾನದಲ್ಲಿ ಒಂದು ದೇವಾಲಯ ; ಒಂದು ಬಸದಿಗೆ ಸ್ಥಳವಿಲ್ಲವೇ — ಅದಕ್ಕಾಗಿ ನೀವು ಹೊಡೆದಾಡಿ, ದೇಶವನ್ನೇ ಕ್ಷೋಭೆಗೊಳಗಾಗಿಸಬೇಕೇ ? ನೀವು ನೀವೇ ಒಮ್ಮತಿ ಸಮ್ಮತಿಯಿಂದ ನಿರ್ಧರಿಸಬೇಕಾದ ಅಲ್ಪ ವಿಷಯದಲ್ಲಿ

ನಾವು ಪ್ರವೇಶಿಸಬೇಕಾಗಿ ಬಂದಿರುವುದು ಶೋಚನೀಯ” ಎಂದರು.

ಉಭಯಕುಲದ ನಾಯಕರು ಕತ್ತು ತಗ್ಗಿಸಿದರು.

“ಈ ವಿಷಯ ಹೇಗೆ ಇತ್ಯರ್ಥವಾಗಬೇಕೆನ್ನುವುದನ್ನು ನೀವೇ ತಿಳಿಸಿ. ಪ್ರಜಾಭಿಪ್ರಾಯವನ್ನು ಹತ್ತಿಕ್ಕಿ ನಮ್ಮ ಅಭಿಪ್ರಾಯ ಮುಂದೊತ್ತಲು ನಾವು ಇಷ್ಟ ಪಡುವುದಿಲ್ಲ.”

ಜೈನ ವೈಷ್ಣವ ನಾಯಕರಿಬ್ಬರೂ

“ತಮ್ಮ ತೀರ್ಮಾನದಂತೆ ನಡೆಯಲು ನಾವು ಸಿದ್ಧರಾಗಿದ್ದೇವೆ” ಎಂದರು.

ಬುಕ್ಕರಾಯರು ಜೈನಕುಲದ ಮುಖಂಡನ ಕೈಹಿಡಿದುಕೊಂಡು, ಅದನ್ನು ವೈಷ್ಣವಾಚಾರ್ಯರ ಕೈಯಲ್ಲಿಟ್ಟು

“ನೀವು ಅಣ್ಣತಮ್ಮಂದಿರಂತೆ ಬಾಳಬೇಕು. ಅದೇ ಈ ರಾಜ್ಯದ ಶ್ರೇಯಸ್ಸು. ಭೂಮಿಯನ್ನು ಇಬ್ಬರೂ ಸಮಸಮವಾಗಿ ಹಂಚಿಕೊಳ್ಳಿ. ನಿಮಗೆ ಸಾಲದೇ ಬಂದರೆ, ನಮ್ಮ ಭೂಮಿಯ ಕೆಲಭಾಗ ಕೊಡುತ್ತೇವೆ. ಜೈನ, ಬೌದ್ಧ, ಹಿಂದೂ, ಮುಸ್ಲಿಮ ಧರ್ಮಗಳೆಲ್ಲವೂ ಶ್ರೀ ಭುವನೇಶ್ವರಿಯ ಆಭರಣಗಳಾಗಿವೆ - ಚಂದ್ರ ಸೂರ್ಯರಿರುವರೆಗೆ ಜೈನಮತವನ್ನು ವೈಷ್ಣವರೂ, ವೈಷ್ಣವಮತವನ್ನು ಜೈನರೂ ರಕ್ಷಿಸಬೇಕು.”

ಎಂದವರಲ್ಲಿ ಮೈತ್ರಿ ಕಲ್ಪಿಸಿ, ಅದರ ದ್ಯೋತಕವಾಗಿ ಶಾಸನ ಬರೆಸಿ ಸ್ಥಾಪಿಸಿದರು.

ಸ್ವಸ್ತಿ ಸಮಸ್ತ ಪ್ರಶಸ್ತಿ ಸಹಿತಂ
ಪಾಷಂಡ ಸಾಗರ ಮಹಾಬಡವಾಮುಖಾಗ್ನಿಃ
ಶ್ರೀರಂಗರಾಜ ಚರಣಾಂಬುಜ ಮೂಲದಾಸಃ
ಶ್ರೀವಿಷ್ಣುಲೋಕ ಮಣಿಮಂಟಪ ಮಾರ್ಗದಾಯೀ
ರಾಮಾನುಜೋ ವಿಜಯತೇ ಯತಿರಾಜರಾಜಃ

ಶಕವರ್ಷ ೧೨೯೦ ನೆಯ ಕೀಲಕ ಸಂವತ್ಸರದ ಭಾದ್ರಪದ ಶು|| ೧೦ ಬೃ|| ಸ್ವಸ್ತಿ ಶ್ರೀಮನ್ಮಹಾಮಂಡಳೇಶ್ವರಂ ಅರಿರಾಯ ವಿಭಾಡ ಭಾಷೆಗೆ ತಪ್ಪುವ ರಾಯರ ಗಂಡ ಶ್ರೀ ವೀರ ಬುಕ್ಕರಾಯನು ಪೃಥ್ವಿರಾಜ್ಯವ ಮಾಡುವ ಕಾಲದಲ್ಲಿ ಜೈನರಿಗೂ ಭಕ್ತರಿಗೂ ಸಂವಾಜವಾದಲ್ಲಿ ಆನೆಯಗೊಂದಿ ಹೊಸ ಪಟ್ಟಣ ಪೆನುಗೊಂಡೆ ಕಲ್ಲೆಹದಪಟ್ಟಣವೊಳಗಾದ ಸಮಸ್ತ ನಾಡ ಭವ್ಯ

ಜನಂಗಳು ಆ ಬುಕ್ಕರಾಯರಿಗೆ ಭಕ್ತರು ಮಾಡುವ ಅನ್ಯಾಯಗಳನ್ನು ಬಿನ್ನಹಂ ಮಾಡಲಾಗಿ ಕೋವಿಲ್ ತಿರುಮಲೆ ಪೆರುಮಾಳ್ ಕೋವಿಲ್ ತಿರು ನಾರಾಯಣಪುರ ಮುಖ್ಯವಾದ ಸಕಳಾಚಾರ್ಯರೂ ಸಕಳ ಸಮಯಿಗಳೂ ಸಕಳ ಸಾತ್ವಿಕರೂ ಮೋಷ್ಟಿಕರು ತಿರುಪಣಿ ತಿರುವಡಿ ತಣ್ಣೀರವರು ನಲ್ವತ್ತೆಂಟು ಜನಂಗಳು ಸಾವಂತ ಬೋವಕ್ಕಳು ತಿರಿಕುಲ ಜಾಂಬವ ಕುಲವೊಳಗಾದ ಹದಿನೆಂಟು ನಾಡ ಶ್ರೀವೈಷ್ಣವರ ಕೈಯ್ಯಲು ಮಹಾರಾಯನು ವೈಷ್ಣವ ದರ್ಶನಕ್ಕೆಯೂ ಜೈನದರ್ಶನಕ್ಕೆಯೂ ಭೇದವಿಲ್ಲವೆಂದು ರಾಯನು ವೈಷ್ಣವರ ಕೈಯ್ಯಲು ಜೈನರ ಕೈವಿಡಿದುಕೊಟ್ಟು ಈ ಜೈನದರ್ಶನಕ್ಕೆ ಪೂರ್ವ ಮರ್ಯಾದೆ ಯಲು ಪಂಚಮಹಾವಾದ್ಯಂಗಳೂ ಕಳಶವೂ ಸಲ್ಲುವುದು ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿವೃದ್ಧಿಯಾದರೂ ವೈಷ್ಣವ ಹಾನಿವೃದ್ಧಿಯಾಗಿ ಪಾಲಿ ಸುವರು ಈ ಮರ್ಯಾದೆಯಲು ಎಲ್ಲಾ ರಾಜ್ಯದೊಳುಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವನ್ನಿಟ್ಟು ಪಾಲಿಸುವರು ಚಂದ್ರಾರ್ಕಸ್ಥಾಯಿಯಾಗಿ ವೈಷ್ಣವ ಸಮಯವು ಜೈನದರ್ಶನವ ರಕ್ಷಿಸಿಕೊಂಡು ಬಹೆವು ವೈಷ್ಣವರೂ ಜೈನರೂ ಒಂದು ಭೇದವಾಗಿ ಕಾಣಲಾಗದು ಶ್ರೀ ತಿರುಮಲೆಯ ತಾತಯ್ಯಂ ಗಳು ಸಮಸ್ತ ರಾಜ್ಯದ ಭವ್ಯ ಜನಂಗಳ ಅನುಮತದಿಂದ ಬೆಳಗುಳದ ತೀರ್ಥ ದಲ್ಲಿ ವೈಷ್ಣವ ಅಂಗರಕ್ಷೆಗೋಸುಗ ಸಮಸ್ತ ರಾಜ್ಯದೊಳಗುಳ್ಳಂತಹ ಜೈನರ ಬಾಗಿಲುಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣ ಕೊಟ್ಟು ಆ ಎತ್ತಿದ ಹೊನ್ನಿಂಗೆ ದೇವರ ಅಂಗರಕ್ಷಗೆ ಯಿಪ್ಪತ್ತಾಳನೂ ಸಂತವಿಟ್ಟು ಮಿಕ್ಕ ಹೊನ್ನಿಂಗೆ ಜೀರ್ಣಜಿನಾಲಯಗಳಿಗೆ ಸೊದೆಯನಿಕ್ಕುವುದು ಈ ಮರಿಯಾದೆಯೊಲು ಚಂದ್ರಾರ್ಕರುಳನ್ನಂ ತಪ್ಪಲೀಯದೆ ವರ್ಷವರ್ಷಕ್ಕೆ ಕೊಟ್ಟು ಕೀರ್ತಿಯನೂ ಪುಣ್ಯವನೂ ಉಪಾರ್ಜಿಸಿಕೊಂಬುದು ಈ ನಾಡಿನ ಕಟ್ಟಳೆಯನು ಆವನೊಬ್ಬನು ಮೀರಿದವನು ರಾಜದ್ರೋಹಿ ಸಂಘಸಮುದಾಯಕ್ಕೆ ದ್ರೋಹಿ ತಪಸ್ವಿಯಾಗಲಿ ಗ್ರಾಮಿಣಿಯಾಗಲಿ ಈ ಧರ್ಮವ ಕೆಡಿಸಿದರಾದರೆ ಗಂಗೆಯ ತಡಿಯಲ್ಲಿ ಕಪಿಲೆ ಯನೂ ಬ್ರಾಹ್ಮಣನನೂ ಕೊಂದ ಪಾಪದಲ್ಲಿ ಹೋಹರು.

ಸ್ವದ [ತ್ತಾ]ಂ ಪರದ[ತ್ತಾ]ಂ ವಾ ಯೋ ಹರೇ [ತ] ವಸುಂಧರಾ[ಂ]
ಷಷ್ಟಿವ [ರ] ರ್ಷ ಸಹಸ್ರಾಣಿ [ವಿಷ್ಠಾ]ಯಾಂ ಜಾಯತೇ ಕ್ರಿಮಿ [ಃ]

ರಾಯರ ಧಾರ್ಮಿಕ ಸಮಭಾವನೆ ವಿಜಯನಗರಕ್ಕೆ ಮಾತ್ರವಲ್ಲದೆ ಭಾರತಕ್ಕೇ ಮಾದರಿಯಾಯಿತು.

# ೨೮

ಬಹಮನಿ ಸುಲ್ತಾನ್ ಮಹಮದರಿಂದ ಬಂದಿದ್ದ 'ವಿವಾಹ ಮಹೋತ್ಸವಾಹ್ವಾನ ಪತ್ರಿಕೆ' ಕಂಡು ಮಹಾರಾಜಾ ಬುಕ್ಕರಾಯರು ಸಂತೋಷಗೊಂಡರು. ಅದರೊಂದಿಗಿದ್ದ ವಾಲಿ ಮಹಮದರ ಪತ್ರವನ್ನು ಮಾರಪ್ಪನಾಯಕರು ಓದಿ

"ನಾವು ವಿವಾಹಕ್ಕೆ ಬರಲೇಬೇಕೆಂದು ಒತ್ತಾಯಪೂರ್ವಕವಾಗಿ ವಾಲಿ ಮಹಮದರು ವಿನಂತಿಸಿಕೊಂಡಿದ್ದಾರೆ ಪ್ರಭೂ" ಎಂದರು.

"ಹೋಗಬೇಕಾದುದು ನಮ್ಮ ಕರ್ತವ್ಯ. ವಾಲಿಮಹಮದರ ಪ್ರೇರಣೆಯಿಂದಲೇ ಬಹಮನಿಯವರು ನಮ್ಮ ಬಗ್ಗೆ ಮೈತ್ರಿಯಿಂದಿದ್ದಾರೆ. ಈ ಸಂದರ್ಭದಲ್ಲಿ ನಾವಾಗಲಿ, ನಮ್ಮ ಪ್ರತಿನಿಧಿಗಳಾಗಲಿ ಹೋಗಿ ವಾಲಿ ಮಹಮದರ ಮನಸ್ಸಂತೋಷಪಡಿಸಬೇಕು."

"ತಾವೇ ಹೋಗುವುದಾದರೆ........"

"ನಮಗೆ ವ್ಯವಧಾನವೆಲ್ಲಿದೆ ಮಾರಪ್ಪನಾಯಕರೇ. ನೀವು ನಮ್ಮ ಪರವಾಗಿ ಹೋಗಿ ಬನ್ನಿ. ಸುಲ್ತಾನರ ಸೋದರಿಗೂ, ಭಾವನಿಗೂ ಉಚಿತ ಉಡುಗೊರೆ ತೆಗೆದುಕೊಂಡು ಹೋಗಿ. ಉತ್ಸವ ಮುಗಿಯುವವರೆಗೆ ನೀವು ಅಲ್ಲೇ ಇದ್ದು ಬನ್ನಿ."

ದೊರೆಗಳ ಇಚ್ಛೆಯಂತೆ, ವಿಜಯನಗರದಿಂದ ಮಾರಪ್ಪನಾಯಕರು, ದೊಡ್ಡ ಮಸೀದಿಯ ಇಮಾಂಸಾಹೇಬರು, ನಾಲ್ಕು ಜನ ಸರದಾರರು ಹೊರಡಲನುವಾದರು. ಆರು ಆನೆಗಳು ಹೊರುವಷ್ಟು ನಗನಾಣ್ಯ, ಖಿಲ್ಲತ್ತುಗಳು ಅಣಿಯಾದವು.

ನಾಡಿನ ಕೆಲವು ಪ್ರಸಿದ್ಧಗಾಯಕ, ಗಾಯಿಕೆಯವರು, ನೃತ್ಯಕಲಾ ಕೋವಿದರು, ಯಕ್ಷಗಾನ ಪ್ರಸಂಗಧವರನ್ನೂ ಮಾರಪ್ಪನಾಯಕರು ಜತೆಯಲ್ಲಿ ಕರೆದುಕೊಂಡರು.

ವಿಜಯನಗರದ ಅತಿಥಿಗಳು ಬಿಡಾರ ಮಾಡಲು 'ದಿಲ್‌ಕುಷ್

ಮಹಲು ' ಸಜ್ಜುಗೊಳಿಸಲ್ಪಟ್ಟಿತು. ಸ್ವಯಂ ವಾಲಿ ಮಹಮದರೇ ನಿಂತುಕೊಂಡು, ಎಲ್ಲ ವ್ಯವಸ್ಥೆಯನ್ನೂ ಅನುಲಕ್ಷಿಸಿದ್ದರು.

ಕೋಟೆಯ ಮಹಾದ್ವಾರದಲ್ಲಿಯೇ ಕಾದಿದ್ದು, ಸಕಲ ರಾಜ ಮರ್ಯಾದೆಯೊಂದಿಗೆ ಮಾರಪ್ಪನಾಯಕರನ್ನೂ ಅವರ ಪರಿವಾರವನ್ನೂ ಸ್ವಾಗತಿಸಿದರು.

ರಥವಿಳಿದ ಮಾರಪ್ಪನಾಯಕರು, ವಾಲಿ ಮಹಮದರನ್ನು ಗಾಢವಾಗಿ ಆಲಂಗಿಸಿ ಯೋಗಕ್ಷೇಮ ವಿಚಾರಿಸಿದರು.

ಮಾರಪ್ಪನಾಯಕರು ಬಿಡಾರ ತಲುಪಿದ ಸ್ವಲ್ಪ ಹೊತ್ತಿನೊಳಗಾಗಿ ಸುಲ್ತಾನರು, ಷಹಜಾದಿಯೊಂದಿಗೆ ಆಗಮಿಸಿ ಕುಶಲ ಪ್ರಶ್ನೆಗಳನ್ನು ಮಾಡಿ

" ನಿಮ್ಮ ಪ್ರಭುಗಳಾದ ಮಹಾರಾಜಾಧಿರಾಜ ಬುಕ್ಕರಾಯರು ಬರುತ್ತಾರೆಂದು ನಾವು ತುಂಬಾ ಆಸೆಯಿಟ್ಟುಕೊಂಡಿದ್ದೆವು " ಎಂದರು.

" ಇಲ್ಲಿಗೆ ಬರಲು ಮಹಾಪ್ರಭುಗಳೂ ತುಂಬ ಉತ್ಸುಕರಾಗಿದ್ದರು. ನವರಾತ್ರಿ ಹತ್ತಿರ ಬಂತು. ಅದರ ಸಂಬಂಧವಾದ ಅನೇಕ ಕಲಾಪಗಳನ್ನು ನಿರ್ವಹಿಸಲು ಪ್ರಭುಗಳೇ ಇರಬೇಕು. ವಧೂವರರಿಗೆ ಶುಭಾಶಯ ತಿಳಿಸಿ, ಕಲ್ಯಾಣಾನಂತರ ಅವರ ರಾಜಧಾನಿಗೆ ಬಂದು ನಮ್ಮ ಆತಿಥ್ಯ ಸ್ವೀಕರಿಸ ಬೇಕೆಂದು ಪ್ರಾರ್ಥಿಸಿಕೊಳ್ಳಲು ಪ್ರಭುಗಳು ನನಗೆ ಆಜ್ಞೆ ವಿಧಿಸಿದ್ದಾರೆ."

ಸುಪ್ರೀತರಾದ ಸುಲ್ತಾನರು ಆಗಲಿ ಎಂದು ಒಪ್ಪಿಕೊಂಡರು.

ವಿವಾಹಮುಹೂರ್ತದ ದಿನ ಮಾರಪ್ಪನಾಯಕರು ವಧುವಿಗೆ ತಾವು ತಂದಿದ್ದ ವಜ್ರಹಾರವನ್ನು ಶ್ರೀಮನ್ಮಹಾರಾಣಿ ಗೌರಾಂಬಿಕೆಯವರ ಹೆಸರಿನಲ್ಲಿ ಓದಿಸಿ, ವರನಿಗೆ ವಜ್ರಖಚಿತವಾದ ಖಡ್ಗವೊಂದನ್ನು ಓದಿಸಿ, ಸುಲ್ತಾನರಿಗೆ ಯೋಗ್ಯ ಉಡುಗೊರೆಯನ್ನಿತ್ತರು.

ವಿಜಯನಗರದರಸರ ಧಾರಾಳ ಎಲ್ಲರನ್ನೂ ಅಚ್ಚರಿಗೊಳಿಸಿತು.

ಮೂರು ದಿನದ ಉತ್ಸವ ಕಳೆದ ಮೇಲೆ ನಾಲ್ಕನೆಯ ದಿನ ವಾಲಿ ಮಹಮದರು, ಮಾರಪ್ಪನಾಯಕರನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ತಾವು ನಡೆಸಿದ್ದ ರಚನಾತ್ಮಕ ಕಾರ್ಯಗಳನ್ನೆಲ್ಲಾ ತೋರಿಸಿ, ಅವರ ಸಲಹೆ ಕೇಳಿದರು.

" ನಿಮಗೆ ಶಿಲ್ಪಿಗಳ ಕೊರತೆಯಿರುವಂತೆ ಕಾಣುತ್ತದೆ. ನೀವು ಅಪೇಕ್ಷಿಸು ವುದಾದರೆ ನಮ್ಮ ಕೆಲವು ಶಿಲ್ಪಿಗಳನ್ನು ಕಳಿಸಿಕೊಡುತ್ತೇನೆ."

" ದಯೆಯಿಟ್ಟು ಕಳಿಸಿಕೊಡಿ. ಹಾಗೇ ನಿಮ್ಮ ತಂತ್ರ ವಿಶಾರದರನ್ನೂ ಕಳಿಸಿಕೊಡಬೇಕು. ನೀರಿನ ಕೊರತೆಯಿಂದ ರಾಜಧಾನಿಯ ಜನ ಬಹಳ

ಬಾಧೆ ಪಡುತ್ತಿದ್ದಾರೆ. ಅವರನ್ನು ನಿವಾರಿಸಬೇಕು."

"ಅಗತ್ಯವಾಗಿ ಆಗಲಿ."

ಮಾರಪ್ಪನಾಯಕರು ಇನ್ನೆರಡು ದಿನವಿದ್ದು ಸುಲ್ತಾನರ ವಿಶೇಷದರ್ಬಾರಿನಲ್ಲಿ ತಾಂಬೂಲ ತೆಗೆದುಕೊಂಡು ಊರಿಗೆ ಹೊರಡಲು ಸಿದ್ಧವಾದರು.

ಅದೇ ರಾತ್ರಿ ಮಾರಪ್ಪನಾಯಕರನ್ನು ಕಾಣಬಂದ ವಾಲಿ ಮಹಮುದರು ಬಹಳ ಹೊತ್ತು ಮಾತನಾಡುತ್ತಾ ಕುಳಿತರು.

ರೂಪವತಿಯರ ಪೂರ್ವಕಥೆ, ಈ ವಿವಾಹವನ್ನು ವಾಲಿ ಮಹಮುದರು ಸಾಧಿಸಿದ ಬಗೆಯನ್ನು ಕೇಳಿ ಅರಿತಿದ್ದ ಮಾರಪ್ಪನಾಯಕರು ವಾಲಿ ಮಹಮುದರನ್ನು ಅಭಿವಂದಿಸುತ್ತಾ

"ಶೀಲವೇ ರಾಜ್ಯದ ಅಡಿಗಲ್ಲು. ಆಳರಸರಾಗಿರುವರಂತೂ ಅದನ್ನು ವೀರ ನಿಷ್ಠೆಯಿಂದ ಪರಿಪಾಲಿಸಬೇಕು. ತಾವು ಬಹಮನಿ ರಾಜ್ಯಕ್ಕೇ ಮೇಲ್ಪಂಕ್ತಿ ಹಾಕಿಕೊಟ್ಟಿರಿ."

"ಇದರಲ್ಲಿ ನನ್ನದೇನು ಹೆಚ್ಚುಗಾರಿಕೆ ನಾಯಕರೇ. ಷಹಜಾದಿ ಸಾಹೀಬಾ ಅವರು ನನ್ನ ಮಾತಿಗೆ ಬೆಲೆಕೊಟ್ಟು, ಉಪಕಾರ ಮಾಡಿದರು."

ಮಾರಪ್ಪನಾಯಕರು ನಸುನಗುತ್ತಾ "ಷಹಜಾದಿಯವರ ಷಾದಿಗೆ ಆಮಂತ್ರಣ ಕೊಟ್ಟು ಅದನ್ನು ಅತ್ಯಂತ ವಿಜೃಂಭಣೆಯಿಂದ ನೆರವೇರಿಸಿದಿರಿ. ನಿಮ್ಮ ಷಾದಿಗೆ ಯಾವಾಗ ಆಮಂತ್ರಣ ಕೊಡುವಿರಿ ?"

"ಆಮಂತ್ರಣ ಕೊಡುವ ಸನ್ನಿವೇಶವೇ ಒದಗಲಾರದು ನಾಯಕರೇ !"

"ಏಕೆ – ಷಾದಿಯಾಗಲು ಇಷ್ಟವಿಲ್ಲವೇ ?"

"ಹೆಂಡತಿ – ಮನೆ – ಮಕ್ಕಳು ಇವೆಲ್ಲಾ ಇದ್ದರೆ 'ನಾನು – ನನ್ನದು' ಎನ್ನುವ ದುರಭಿಮಾನ ಬೆಳೆಯುತ್ತದೆ. ಬಡೇ ಸುಲ್ತಾನರು ಸ್ಥಾಪಿಸಿದ ಬಹಮನಿರಾಜ್ಯ, ಎರಡನೆಯ ಸುಲ್ತಾನರ ಕಾಲಕ್ಕೇ ಅಳ್ಳಾಡಿಹೋಯಿತು. ಈ ರಾಜ್ಯ ಒಡೆದು ತುಮರುತುಮರಾಗದಂತೆ ಸದಾ ಅದಕ್ಕಾಗಿ ಯಾರಾದರೂ ಚಿಂತೆ ಮಾಡಬೇಕು – ಧ್ಯಾನ ಮಾಡಬೇಕು ; ನೀವು – ವಿಜಯನಗರದವರು ಪರಮಪುಣ್ಯಶಾಲಿಗಳು. ಖುದಾನೆ ಶ್ರೀಗುರು ವಿದ್ಯಾರಣ್ಯರ ರೂಪಿನಲ್ಲಿ ಬಂದು ನಿಮ್ಮ ಬೆನ್ನು ಕಾಯುತ್ತಿದ್ದಾನೆ. ಅದಕ್ಕೇ ನೀವು ಹಿಡಿದ ಕೆಲಸ ಜಯವಾಗುತ್ತದೆ ; ಮುಟ್ಟಿದ್ದು ಚಿನ್ನವಾಗುತ್ತದೆ – ನನ್ನ ಜನ್ಮವನ್ನೆಂದೋ ರಾಜ್ಯದ ಹಿತಕ್ಕಾಗಿ ನಿವೇದಿಸಿದ್ದೇನೆ–ಇಲ್ಲದ ಬಂಧನಗಳನ್ನು ಈಗೇಕೆ ಕಟ್ಟಿಕೊಳ್ಳಲಿ."

"ಶ್ರೀಗುರು ವಿದ್ಯಾರಣ್ಯರ ಶಿಷ್ಯರೆಂದು ಹೇಳಿಕೊಳ್ಳುತ್ತಿರುವ ನಮ್ಮನ್ನು ನಾಚಿಸುತ್ತಿರುವಿರಿ ವಾಲಿ ಮಹಮುದ್."

"ನಾಯಕರೇ, ಆ ಮಹಾವ್ಯಕ್ತಿಯ ಹೆಸರು ಹೇಳಿದರೆ ನನ್ನ ಮೈನವಿರೇಳುತ್ತದೆ. ನಾನು ಅವರನ್ನು ಕಂಡುದು ಎರಡೇ ಸಲ – ಒಮ್ಮೆ ನಾನು ರಾಜಪ್ರತಿನಿಧಿಯಾಗಿ ಬಂದಿದ್ದಾಗ ನೀವೇ ನನ್ನನ್ನು ಕರೆದೊಯ್ದು 'ಗಿರಿವನ'ದಲ್ಲಿ ಶ್ರೀಗಳವರ ದರ್ಶನ ಮಾಡಿಸಿದಿರಿ. ಇನ್ನೊಮ್ಮೆ ನಾನು ಫಕೀರನಾಗಿ ಬಂದಿದ್ದೆ – ಸುಲ್ತಾನ್ ಮುಜಾಹಿದರ ದರ್ಪ, ದಬ್ಬಾಳಿಕೆ ನೋಡಲಾಗದೆ ಹಜ್‌ಗೆ ಯಾತ್ರೆ ಹೊರಟಿದ್ದೆ. ಆಗ ಯಾವದೊ ಪ್ರೇರಣೆ ಯಾಯಿತು. ಶ್ರೀಗುರುಗಳನ್ನು ಗೋಪ್ಯವಾಗಿ ಕಂಡೆ. ಆ ಎರಡು ದಿನಗಳ ಅನುಭವ ಅಚ್ಚಳಿಯದೆ ನನ್ನ ಮನಸ್ಸಿನಲ್ಲಿ ನಿಂತಿದೆ. ನಾನು ಕಲ್ಬುರ್ಗಿಯಲ್ಲಿ ನಿರ್ವಹಿಸಿರುವ ಅಲ್ಪಸ್ವಲ್ಪ ಕೆಲಸದ ಕೀರ್ತಿ ಅವರಿಗೇ ಸೇರಬೇಕು. ಅವರ ಸಂದೇಶ ನನ್ನನ್ನೊಬ್ಬ ಮನುಷ್ಯನನ್ನಾಗಿ ಮಾಡಿತು – ನಾಯಕರೇ, ನನ್ನ ಅನಂತಾನಂತ ಸಲಾಮುಗಳನ್ನು ಶ್ರೀಗಳವರ ಚರಣಕ್ಕೆ ಅರ್ಪಿಸಿ, ಗುಲಾಮ ನನ್ನು ಆಶೀರ್ವದಿಸಲು ಕೇಳಿಕೊಳ್ಳಿ."

ಮಾರಪ್ಪನಾಯಕರ ಕಂಠ ಬಿಗಿದು ಬಂದಿತು.

ವಾಲಿ ಮಹಮುದರನ್ನಪ್ಪಿ,

"ಪ್ರಿಯಬಂಧು-ನೀವು ಜೀವನ್ಮುಕ್ತರು – ಸೇವೆ, ತ್ಯಾಗಕ್ಕೆ ಜನ್ಮವನ್ನು ಧಾರೆಯೆರೆದಿರುವ ಮಹಾಪುರುಷರು ನೀವು. ನಮ್ಮ ಉಭಯ ರಾಜ್ಯಗಳಲ್ಲಿ ಶಾಂತಿಸ್ಥಾಪಿಸಿ, ಲೋಕಕ್ಕೇ ಮಹೋಪಕಾರಮಾಡಿದಿರಿ – ಬಿಡುವು ಮಾಡಿಕೊಂಡು ವಿಜಯನಗರಕ್ಕೆ ಬನ್ನಿ – ಶ್ರೀಗುರುದೇವರ ಮನಸ್ಸಿಗೂ ಆನಂದವಾಗುತ್ತದೆ."

"ಖುದಾ ಪರವಾನಗಿ ಕೊಟ್ಟ ದಿನ ಬರುತ್ತೇನೆ." ಎಂದರು.

ಬೆಳಿಗ್ಗೆ ಮಾರಪ್ಪನಾಯಕರು ಅವರ ಪರಿವಾರವನ್ನು ಬಹಮನಿಯವರು ಅತ್ಯಂತ ಗೌರವದಿಂದ ಬೀಳ್ಕೊಟ್ಟರು.

## ೨೯

ನಾಗಲಾಪುರದ ಪಕ್ಕದ ಕಾಡಿನಲ್ಲಿ ಸೇರಿಕೊಂಡಿದ್ದ ಚಿರತೆಯೊಂದು ನಿರ್ಭಯವಾಗಿ ಊರು ಪ್ರವೇಶಿಸಿ ದನಕರುಗಳನ್ನೂ, ಎಳೆಯ ಮಕ್ಕಳನ್ನೂ ಹೊತ್ತುಕೊಂಡು ಹೋಗುತ್ತಿತ್ತು.

ಚಿರತೆಯ ಹಾವಳಿಗೆ ತತ್ತರಿಸಿದ ನಾಗಲಾಪುರದ ಜನ ರಾಜಧಾನಿಗೆ ಬಂದು ಮಹಾರಾಜರವರಲ್ಲಿ ಮೊರೆಯಿಟ್ಟರು. ಚಿರತೆಯ ಹಾವಳಿಯಿಂದ ನಾಗಲಾಪುರದ ಜನರನ್ನು ರಕ್ಷಿಸಲು ಶ್ರೀಮನ್ಮಹಾರಾಜರೇ ಸಿದ್ಧರಾದರು.

“ ಇದು ಯಾವ ದೊಡ್ಡ ವಿಷಯ. ತಾವೇ ಏಕೆ ಹೋಗಬೇಕು – ಅಪ್ಪಣೆಯಾದರೆ ನಾನು ಹೋಗಿ ಬರುತ್ತೇನೆ.”

ಎಂದು ಮುದ್ದಪ್ಪನಾಯಕರು ಅರಿಕೆಮಾಡಿಕೊಂಡರೂ ಲಕ್ಷಿಸದೆ ಮಹಾರಾಜರು

“ ನಾವೇ ಹೋಗಿ ಬರುತ್ತೇವೆ ” ಎಂದರು.

ನಾಗಲಾಪುರದ ಕಾಡಿನಲ್ಲಿ ಮಹಾರಾಜರು ಮರಸಿನಲ್ಲಿ ಕುಳಿತರು.

ಒಂದು ದಿನ ಕಳೆಯಿತು – ಎರಡು ದಿನ ಕಳೆಯಿತು – ಚಿರತೆ ಮುಖ ಕಾಣಿಸಲಿಲ್ಲ.

“ ಎರಡು ದಿನದಿಂದ ಹೊರಗೇ ಬಂದಿಲ್ಲ ಮಹಾಪ್ರಭು – ಇವತ್ತಂತೂ ನೀರಿಗಾಗಿಯಾದರೂ ಅದು ಹೊರಗೆ ಬರುತ್ತದೆ.”

ಎಂದು ಕಾಡುಗೊಲ್ಲರು ಸೂಚನೆಯಿತ್ತರು.

ಕಾಡಿನಲ್ಲಿದ್ದ ಒಂದು ತಟಾಕಕ್ಕೆ ಚಿರತೆ, ಸೂರ್ಯಾಸ್ತದ ವೇಳೆಗೆ ಸರಿಯಾಗಿ ಬಂದು ನೀರು ಕುಡಿಯಲಾರಂಭಿಸಿತು. ಆ ವೇಳೆಯಲ್ಲಿ ಅದನ್ನು ಸಂಹರಿಸುವುದು ಧರ್ಮವಲ್ಲ ಎಂದು ಮಹಾರಾಜರು ಸುಮ್ಮನಿದ್ದರು.

ಚಿರತೆ ಹೊಟ್ಟೆತುಂಬ ನೀರು ಕುಡಿದು, ಒಮ್ಮೆ ಕತ್ತೆತ್ತಿ ಸಿಂಹಾವಲೋಕನಮಾಡಿತು. ಎದುರಿಗೆ ಮೂರುರಾಯರ ಗಂಡ, ಕಾಲಾಂತಕ

ನಿಂತಿದ್ದರು. ಚಿರತೆ ಒಂದೇ ಪೆಟ್ಟಿಗೆ ಚಂಗನೆ ಹಾರಿತು. ಪ್ರಭುಗಳು ಅದರ ಹಿಡಿತಕ್ಕೆ ಸಿಕ್ಕದಂತೆ ಪಕ್ಕಕ್ಕೆ ಜಾರಿಕೊಂಡು, ಕತ್ತಿಯಿಂದ ಅದನ್ನೆದುರಿಸಿದರು. ಚಿರತೆ ಶಕ್ತಿ ಮೀರಿ ಹೋರಾಡಿ, ದೊರೆಗಳ ಪಾದದಡಿ ಬಿದ್ದು ಪ್ರಾಣ ಒಪ್ಪಿಸಿತು.

ದೊರೆಗಳ ವೀರವಿಕ್ರಮವನ್ನು ಕಣ್ಣಾರೆ ಕಂಡ ನಾಗಲಾಪುರದವರ ಆನಂದಕ್ಕೆ ಮೇರೆಯೇ ಇರಲಿಲ್ಲ.

ಬೇಟೆಯನ್ನು ಹೊರಸಿಕೊಂಡು ಮಹಾ ಪ್ರಭುಗಳು ರಾಜಧಾನಿ ಸೇರಿದರು.

ಅಂದೇ ಅವರ ಮೈಯಲ್ಲಿ ಜ್ವರ ಕಾಣಿಸಿಕೊಂಡಿತು.

ವಿಜಯನಗರದ ಧನ್ವಂತರಿ ಎಂದು ಪ್ರಸಿದ್ಧನಾಗಿದ್ದ ಮಂಗರಾಜನೇ ಪ್ರಭುಗಳ ಶಿಶ್ರೂಷೆಗೆ ನಿಂತ.

"ನೀರಿನ ದೋಷವಿರಬಹುದು, ಪ್ರಭುಗಳು ಯಾವುದೋ ದೋಷಜಲ ಸೇವಿಸಿರುವಂತೆ ಕಾಣುತ್ತದೆ."

ಎಂದು ರೋಗದ ನಿಧಾನ ಮಾಡಿದ ಮಂಗರಾಜ ವಿರೇಚನಗಳನ್ನಿತ್ತ. ಮಹಾಪ್ರಭುಗಳ ಆರೋಗ್ಯ ಸುಧಾರಿಸಲಿಲ್ಲ. ಜ್ವರ ಇಳಿಮುಖವಾಗಲಿಲ್ಲ.

ರಾಜಧಾನಿಯ ಜೀವನಾಡಿಯೇ ನಿಂತು ಹೋಯಿತು.

ಐದು ದಿನಗಳು ಕಳೆದರೂ ಪ್ರಭುಗಳ ಜ್ವರ ಇಳಿಮುಖಕ್ಕೆ ಬರಲಿಲ್ಲ.

ರಾಜಧಾನಿಯ ವೈದ್ಯರೆಲ್ಲರನ್ನೂ ಬರಮಾಡಿಕೊಂಡು ಮಂಗರಾಜ ತನ ನಿಧಾನ, ಚಿಕಿತ್ಸಾ ಕ್ರಮವನ್ನು ವಿವರಿಸಿದ.

"ಇದಕ್ಕಿಂತ ಹೆಚ್ಚೇನೂ ಮಾಡಲು ಸಾಧ್ಯವಿಲ್ಲ"

ಎಂದವರು ಏಕಕಂಠದಿಂದ ನುಡಿದರು.

ದೇವಾಲಯ, ಮಸೀದಿ, ಇಗರ್ಜಿಗಳಲ್ಲಿ ಸತತವಾಗಿ ಪೂಜೆ, ಪ್ರಾರ್ಥನೆ ನಡೆದಿತ್ತು.

ವಿಜಯನಗರದ ಪ್ರಜಾವರ್ಗ ಅರಮನೆಯ ಮುಂದೆ ಗುಂಪುಸೇರಿ, ಗಂಟೆಗಂಟೆಗೂ ಪ್ರಭುಗಳ ಆರೋಗ್ಯದ ಲಕ್ಷಣ ತಿಳಿಯಲು ಕಾತರಗೊಂಡಿತ್ತು.

ಶ್ರೀಗುರು ವಿದ್ಯಾರಣ್ಯರು ಬೆಳಿಗ್ಗೆ, ಸಂಜೆ ಬಂದು ಮಹಾಪ್ರಭುಗಳನ್ನು ಕಂಡು ಹೋಗುತ್ತಿದ್ದರು. ದುಃಖಿಸುತ್ತಿದ್ದ ಜನರಿಗೆ ಹಲವು ರೀತಿಯಲ್ಲಿ ಸಮಾಧಾನ ಹೇಳುತ್ತಿದ್ದರು.

ಮಹಾರಾಣಿ ಗೌರಾಂಬಿಕೆಯವರೇ ಪ್ರಭುಗಳ ಶಿಶ್ರೂಷೆ ಕೈಗೊಂಡಿದ್ದರು.

ಹನ್ನೆರಡು ದಿನಗಳು ಕಳೆದವು.

ಪ್ರಭುಗಳ ಆರೋಗ್ಯದಲ್ಲಿ ಯಾವ ಸುಧಾರಣೆಯೂ ಕಂಡುಬರಲಿಲ್ಲ.

ಖಗ್ಣಶಯ್ಯೆಯಲ್ಲಿದ್ದ ಮಹಾಪ್ರಭುಗಳು ಒಂದು ದಿನ ಸಂಜೆ, ಎಲ್ಲರನ್ನೂ ಶಯ್ಯಾಗೃಹದಿಂದ ಹೊರಗೆ ಹೋಗಲು ವಿನಂತಿಸಿಕೊಂಡು, ಶ್ರೀಗುರು ವಿದ್ಯಾರಣ್ಯರತ್ತ ತಿರುಗಿ,

" ಗುರುದೇವಾ, ತ್ರಿಕಾಲಜ್ಞಾನಿಗಳಾದ ತಾವು ನನ್ನ ಭವಿಷ್ಯವನ್ನು ಬಲ್ಲವರಾಗಿದ್ದೀರಿ. ಈ ವ್ಯಾಧಿಯಿಂದ ನಾನು ಪಾರಾಗುವೆನೇ ಅಪ್ಪಣೆಯಾಗಬೇಕು."

" ಮೃತ್ಯುವಿಗೆ ಅಂಜದ ಮಹಂತರಾದ ನೀವು ಸಾವಿನ ವಿಷಯವೇಕೆ ಚಿಂತಿಸುತ್ತಿರುವಿರಿ ?"

" ಚಿಂತಿಸುತ್ತಿಲ್ಲ – ನಿಜಸ್ಥಿತಿ ಅರಿವಾದರೆ ಮುಂದಿನ ಕೆಲಸ ಕಾರ್ಯ ಯೋಚಿಸಲನುಕೂಲವಾಗುವುದು."

" ಹುಣ್ಣಿಮೆಯ ದಿನ ದೊಡ್ಡ ಗಂಡಾಂತರವಿದೆ. ಅದು ಪಾರಾದಲ್ಲಿ...."

" ಪಾರಾಗುವೆನೇ ?"

"..................."

" ಯುವರಾಜ ಕುಮಾರರು ಉತ್ತರಾಧಿಕಾರಿಗಳಾಗಿದ್ದಾರೆ. ಅವರ ಕೈ ಹಿಡಿದು, ಮುನ್ನಡೆಸುವ ಭಾರ ತಾವೇ ಹೊರಬೇಕಾಗಿದೆ. ಯುವರಾಜ ಕುಮಾರರು ಅಪ್ರಬುದ್ಧರಾಗಿದ್ದಾರೆ – ಮಾರಪ್ಪನಾಯಕರು ರಾಜ್ಯಸೂತ್ರಗಳನ್ನು ವಹಿಸಿಕೊಳ್ಳುವುದು ಸೂಕ್ತವೆಂದು ತಮಗೆ ತೋರಿದರೆ ಹಾಗೇ ಮಾಡಬಹುದು."

" ಮಾರಪ್ಪನಾಯಕರನ್ನೇ ಕರೆಸಿ ಒಂದು ಮಾತು ಕೇಳಿ ಬಿಡುವುದು ಒಳ್ಳೆಯದಲ್ಲವೇ ?"

ಪ್ರಭುಗಳು ಮೇಲಕ್ಕೇಳಲು ಅವಕಾಶಕೊಡದೆ ಶ್ರೀಗುರುಗಳೇ ಹೊರಗೆ ಹೋಗಿ ಮಾರಪ್ಪನಾಯಕರನ್ನು ಬರಮಾಡಿದರು.

ಶ್ರೀಗುರುಗಳು ಹೃದಯತುಂಬಿದ್ದ ಅಪಾರಚಿಂತೆ ಅವರ ಮುಖದ ಮೇಲೆ ಕಾಣಿಸಿಕೊಂಡಿತು. ಇದ್ದಕ್ಕಿದ್ದಂತೆ ಶ್ರೀಗುರುಗಳಿಗೆ ಮುಪ್ಪಡಿಸಿದಂತೆ ಕಂಡು ಬಂದಿತು.

ಒಳಗುದಿಯನ್ನು ಉಪಶಮನಗೊಳಿಸುತ್ತ ಶ್ರೀಗುರುಗಳು,

"ಉತ್ತರಾಧಿಕಾರಿಗಳ ಬಗ್ಗೆ ಮಹಾಪ್ರಭುಗಳು ಯೋಚಿಸುತ್ತಿದ್ದಾರೆ ನಾಯಕರೇ" ಎಂದರು.

"ಭಗವಾನ್ ವಿರೂಪಾಕ್ಷಸ್ವಾಮಿಯ ಕೃಪೆಯಿಂದ ಮಹಾಪ್ರಭುಗಳ ಆರೋಗ್ಯ ಸುಧಾರಿಸುತ್ತದೆಂದು ನಾವೆಲ್ಲ ದೃಢವಾಗಿ ನಂಬಿದ್ದೇವೆ ಗುರುದೇವಾ."

"ಮಹಾಪ್ರಭುಗಳು ಪೂರ್ಣಾರೋಗ್ಯ ಪಡೆದು, ಮತ್ತೆ ನಮ್ಮ ನಾಯಕತ್ವವನ್ನು ವಹಿಸಿಕೊಳ್ಳಬೇಕೆಂಬುದೇ ಎಲ್ಲರ ಆಕಾಂಕ್ಷೆಯಾಗಿದೆ. ರಾಜ್ಯದ ಹಿತದೃಷ್ಟಿಯಿಂದ ಈ ಕೆಲವು ವಿಷಯಗಳನ್ನು ಪೂರ್ವಭಾವಿಯಾಗಿ ಯೋಚಿಸುವುದರಲ್ಲಿ ತಪ್ಪೇನೂ ಇಲ್ಲ."

"ಯಾವ ಸಂದರ್ಭದಲ್ಲಿಯೂ ಉತ್ತರಾಧಿಕಾರಿಗಳ ಪ್ರಶ್ನೆಯೇ ಏಳುವುದಿಲ್ಲವಲ್ಲ ಗುರುದೇವಾ. ಯುವರಾಜಕುಮಾರ ಇಮ್ಮಡಿ ಹರಿಹರರಿಗೆ ವಿಜಯನಗರದ ಪಟ್ಟ ಮೀಸಲಾಗಿದೆ."

"ಯುವರಾಜಕುಮಾರರು ಅಪ್ರಬುದ್ಧರು – ಈ ಮಹಾ ಸಾಮ್ರಾಜ್ಯದ ಹೊರೆ ಹೊರುವಷ್ಟು ಸಾಮರ್ಥ್ಯ ಅವರಲ್ಲಿಲ್ಲ – ಅವರು ಪ್ರಬುದ್ಧರಾಗುವವರೆಗೆ ದಕ್ಷರಾದವರೊಬ್ಬರು ಪಟ್ಟಾಧಿಕಾರ ವಹಿಸಿಕೊಂಡರೆ ಒಳ್ಳೆಯದೆಂದು ಪ್ರಭುಗಳು ಅಭಿಪ್ರಾಯಪಡುತ್ತಾರೆ."

"ಯುವರಾಜ ಕುಮಾರರಿಗಿಂತಲೂ ದಕ್ಷರಾದವರು ಯಾರು?"

"ನೀವು!"

"ನಾನೇ!! – ಗುರುದೇವಾ, ನನ್ನನ್ನು ಪರೀಕ್ಷಿಸುತ್ತಿರುವಿರಾ?"

"ಇದರಲ್ಲಿ ತಪ್ಪೇನು, ಹರಿಹರರಾಯರಿಂದ ಬುಕ್ಕರಾಯರು ಅಧಿಕಾರ ಸ್ವೀಕರಿಸಲಿಲ್ಲವೇ? – ಅಣ್ಣನಿಂದ ನೀವು ರಾಜ್ಯ ಸ್ವೀಕರಿಸುವುದು ಕ್ರಮ ಬಾಹಿರವಾಗುವುದಿಲ್ಲ.

"ಮಹಾಪ್ರಭುಗಳು ಅಲಂಕರಿಸಿದ ಸ್ಥಾನದಲ್ಲಿ ಕೂಡುವ ಯೋಗ್ಯತೆ ನಮ್ಮಲ್ಲಿ ಯಾರಿಗೂ ಇಲ್ಲ ಗುರುದೇವಾ. ಇಮ್ಮಡಿ ಹರಿಹರದೇವರು ವಯಸ್ಸಿನಲ್ಲಿ ಚಿಕ್ಕವರಾದರೂ ವಿವೇಕದಲ್ಲಿ ದೊಡ್ಡವರಾಗಿದ್ದಾರೆ. ಮಹಾಪ್ರಭುಗಳ ಆಸೆ ಆಕಾಂಕ್ಷೆಗಳನ್ನು ಅವರು ಚೆನ್ನಾಗಿ ಬಲ್ಲರು. ತಂದೆ ಹಾಕಿರುವ ಅಸ್ತಿಭಾರದ ಮೇಲೆ ಭವ್ಯಭವನ ಕಟ್ಟಲು ಮಗ ಸಮರ್ಥನಾಗಿದ್ದಾನೆ. ಈ ಸಿಂಹಾಸನವನ್ನೇರುವ ಯೋಚನೆ ನನ್ನ ಕನಸುಮನಸಿನಲ್ಲೂ ಬರಲಾರದು

ಗುರುದೇವಾ – ಯವರಾಜ ಕುಮಾರರು ನನ್ನ ವಿಷಯದಲ್ಲಿಯೂ ಮುದ್ದಪ್ಪ ನಾಯಕರ ವಿಷಯದಲ್ಲಿಯೂ ಪಿತೃವಾತ್ಸಲ್ಯ ಇಟ್ಟುಕೊಂಡಿದ್ದಾರೆ. ಅವರ ಆಡಳಿತದಲ್ಲಿ ನ್ಯೂನಾತಿರೇಕ ಬರದಂತೆ ನೋಡಿಕೊಳ್ಳುವ ಜವಾಬ್ದಾರಿ ನಮಗಿರಲಿ. ಯಾವ ಕಾರಣಕ್ಕೂ ಯುವರಾಜ ಕುಮಾರರ ಸ್ಥಾನಕ್ಕೆ ಬೇರೆ ಯವರನ್ನು ನೇಮಿಸುವ ಯೋಚನೆ ಮಾಡಬಾರದಾಗಿ ಕೈಜೋಡಿಸಿ ಬೇಡಿ ಕೊಳ್ಳುತ್ತೇನೆ."

ಬುಕ್ಕರಾಯರ ಕಣ್ಣುಗಳಿಂದ ಆನಂದಭಾಷ್ಪಗಳುದುರಿದವು.

"ನಮ್ಮ ಭಾಗ್ಯಕ್ಕೆ ಎಣೆಯುಂಟೇ ಗುರುದೇವಾ – ಕಂಪಣ್ಣ, ಮಾರಪ್ಪ ಮುದ್ದಪ್ಪನಾಯಕರಂಥ ಸೋದರರನ್ನು ಪಡೆದಿರುವುದೇ ಮಹಾಭಾಗ್ಯ – ಮಾರಪ್ಪನಾಯಕರೇ........"

"ಪ್ರಭೂ........"

"ಭಗವಂತನ ಶ್ರೀಪಾದಗಳು ನಮ್ಮನ್ನು ಕರೆಯುತ್ತಿವೆ. ಈ ಪಾರ್ಥಿವ ಶರೀರವನ್ನು ಚೆಲ್ಲಿಕೊಡುವ ಕಾಲ ಸಮೀಪಿಸುತ್ತಿದೆ. ನಿಮ್ಮ ಅತ್ತಿಗೆ ಗೌರಾಂಬಿಕೆ, ದುಃಖ ಸಹಿಸಲಾಗದೆ ಸತಿಯಾಗಲು ಬಯಸಬಹುದು. ಅದಕ್ಕೆ ಅವಕಾಶ ಕೊಡಬೇಡಿ. ಯುವರಾಜ ಕುಮಾರರ ಲಗ್ನವಾಗಿಲ್ಲ. ತಂದೆಯ ಮಾರ್ಗದರ್ಶನದಿಂದ ಚ್ಯುತನಾಗುವ ಮಗನಿಗೆ ತಾಯಿಯ ನಿಧನದ ದುಃಖವೂ ಪ್ರಾಪ್ತವಾಗಬಾರದು."

ಉಕ್ಕುತ್ತಿದ್ದ ದುಃಖ ಸಹಿಸಲಾಗದೆ ಮಾರಪ್ಪನಾಯಕರು

"ಗುರುದೇವಾ — ಗುರುದೇವಾ —" ಎಂದರು.

"ದುಃಖ ನುಂಗಿಕೊಳ್ಳಬೇಕು ನಾಯಕರೇ – ನೀವೇ ಅಧೀರರಾದರೆ ವಿಜಯನಗರದ ಲಕ್ಷಾಂತರ ಜನರನ್ನು ಸಂತೈಸುವರು ಯಾರು ?"

"ಈಗ ನಾವೇನೂ ಮಾಡಲು ಸಾಧ್ಯವಿಲ್ಲವೇ ಗುರುದೇವಾ ?"

"ಏನೂ ಮಾಡಲು ಸಾಧ್ಯವಿಲ್ಲ. ವಿಧಿನಿಯಮ ಉಲ್ಲಂಘಿಸಲು ನಾವು ಶಕ್ತರೇ." ಎಂದರು.

ಒಂದು ವಾರ ಕಳೆಯಿತು.

ಹುಣ್ಣಿಮೆಯ ಬೆಳಗ್ಗೆ ಮಹಾಪ್ರಭುಗಳೆದ್ದು ಶುದ್ಧಸ್ನಾತರಾಗಿ, ಹೊಸ ವಸ್ತ್ರಗಳನ್ನು ಧರಿಸಿ, ಶ್ರೀವಿರೂಪಾಕ್ಷದೇವಾಲಯದಿಂದ ಬಂದ ತೀರ್ಥ ಪ್ರಸಾದ ಸ್ವೀಕರಿಸಿದರು.

ಪ್ರಭುಗಳ ಇಚ್ಛೆಯಂತೆ ರಾಜ್ಯದ ಮಂತ್ರಿಗಳೂ, ಮಾನ್ಯರು ಅವರ ಶಯ್ಯಾಗೃಹಕ್ಕೇ ಬಂದರು.

ಪ್ರಭುಗಳು ಸಮಸ್ತರಿಗೂ ಯುವರಾಜ ಕುಮಾರರನ್ನೊಪ್ಪಿಸುತ್ತಾ

"ನಮ್ಮ ಆಳ್ವಿಕೆ ಯಶಸ್ವಿಯಾದುದು ನಮ್ಮ ಶೌರ್ಯ ಪ್ರತಾಪಗಳಿಂದಲ್ಲ – ಶ್ರೀಗುರು ವಿದ್ಯಾರಣ್ಯರ ತಪಃಪ್ರಭಾವ ನಮಗೆ ಕೋಟಿಭುಜಗಳ ಬಲವಿತ್ತು, ಈ ಸಾಮ್ರಾಜ್ಯ ಸುಭದ್ರವಾಗುವಂತೆ ಮಾಡಿತು. ಸಾಮ್ರಾಜ್ಯ ಈ ಸ್ಥಿತಿಗೆ ಬಂದು, ದಕ್ಷಿಣ ಭಾರತದ ಕಣ್ಮಣಿಯಾಗಲು, ನಾವು ಹೇಗೆ ಕಾರಣರೋ ಹಾಗೆ ನೀವೂ ಕಾರಣರಾಗಿದ್ದೀರಿ ಸುಖದುಃಖಗಳೆರಡನ್ನೂ ಸಮವಾಗಿ ಭಾವಿಸಿ, ಏಕನಿಷ್ಠೆಯಿಂದ ಈ ಪುಣ್ಯಭೂಮಿಯ ಸೇವೆಮಾಡುತ್ತ ಬಂದಿದ್ದೀರಿ. ಯುವರಾಜಕುಮಾರರೇ ನಮ್ಮ ಉತ್ತರಾಧಿಕಾರಿಗಳಾಗಬೇಕೆಂದು ಮಂತ್ರಿಮಂಡಲ ಅಭಿಪ್ರಾಯ ಪಟ್ಟಿದೆ – ನೀವುಗಳೂ ಸಮ್ಮತಿಸುವುದಾದರೆ ನಾವು ಅವರನ್ನೇ ಉತ್ತರಾಧಿಕಾರಿಗಳನ್ನಾಗಿ ನೇಮಿಸುತ್ತೇವೆ."

"ಈ ಬಗ್ಗೆ ಭಿನ್ನಾಭಿಪ್ರಾಯವಿಲ್ಲ ಮಹಾಪ್ರಭು"

ಎಂದು ನಗರದ ಪ್ರಮುಖರು ನಿವೇದಿಸಿಕೊಂಡರು.

"ನಮಗೆ ನೀವು ತೋರಿದ ಗೌರವ, ವಿಶ್ವಾಸವನ್ನೇ ಯುವರಾಜಕುಮಾರರಿಗೆ ತೋರಿಸುತ್ತ ಬರಬೇಕು. ನಿಮ್ಮ – ಅವರ ಪ್ರಯತ್ನದಿಂದಾಗಿ ವಿಜಯನಗರ ಚಿರಸ್ಥಾಯಿಯಾಗಬೇಕು."

ಎಂದು ಮಗನನ್ನು ಹತ್ತಿರ ಕರೆದು

"ಅಪ್ಪಾಜಿ, ನನ್ನ ಪೂಜ್ಯ ಅಣ್ಣಂದಿರಾದ ಶ್ರೀಹರಿಹರರಾಯರು ಅತುಲ ಪರಾಕ್ರಮದಿಂದ ದೊರಕಿಸಿದ ಈ ಸಾಮ್ರಾಜ್ಯವನ್ನು ಶಕ್ತ್ಯನುಸಾರ ನಾವು ಬೆಳಸಿದೆವು. ಈಗ ನಾವು ಸಾಧಿಸಿರುವುದು ಅತ್ಯಲ್ಪ – ಸಾಧಿಸಬೇಕಾದುದು ಮಹತ್ತರ. ಇಡಿಯ ಭಾರತವೇ ವಿಜಯನಗರವಾಗಬೇಕು – ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ಏಕಪ್ರಕಾರವಾಗಿ ಪ್ರಣವಧ್ವಾನ ವ್ಯಾಪಿಸಬೇಕು. ಆ ಮಹಾಧ್ಯೇಯವನ್ನು ಕ್ಷಣಕಾಲವೂ ಮರೆಯಬೇಡಿ. ನಿಮ್ಮ ತನು, ಮನ, ಧನವೆಲ್ಲಾ ರಾಜ್ಯಾಭ್ಯುದಯಕ್ಕೆ ಮೀಸಲಾಗಲಿ.

ನಮ್ಮ ಪ್ರಜೆಗಳೇ ನಮ್ಮ ಮಕ್ಕಳು – ಅವರ ಹಿತವೇ ನಮ್ಮ ಹಿತ – ಅವರ ಸುಖವೇ ನಮ್ಮ ಸುಖ. ಪ್ರಜೆಗಳ ಶಕ್ತಿಯು ಮೊತ್ತವೇ ಪ್ರಭು. ಪ್ರಜೆಗಳಿಗಿಂತ ಪ್ರಭು ದೊಡ್ಡವನಲ್ಲ. ನಾವು ಪ್ರಭುಗಳೆಂಬ ಅಹಂಕಾರ ಯಾವ ಕಾಲಕ್ಕೂ ನಿಮ್ಮ ಮನಸ್ಸಿಗೆ ಬಾರದಿರಲಿ."

ಎಂದು ಶ್ರೀಗುರುಗಳತ್ತ ತಿರುಗಿ, ಮೆಲ್ಲನೆ ಪಲ್ಲಂಕದಿಂದಿಳಿದು ಅವರ ಪಾದಗಳಮೇಲೆ ತಲೆಯಿಟ್ಟು

"ಗುರುದೇವಾ, ಅಪ್ಪಣೆ ಕೊಡಿ - ತಮ್ಮ ಅನುಗ್ರಹದಿಂದ ವಿಜಯ ನಗರ ಎಂದೆಂದಿಗೂ ವಂಚಿತವಾಗದಿರಲಿ."

ಎಂದು ನುಡಿದು ಗುರ್ವಾಶೀರ್ವಾದ ಪಡೆದು, ಪಲ್ಲಂಕದ ಮೇಲೆ ಪವಡಿಸಿ

"ಶ್ರೀ ವಿರೂಪಾಕ್ಷ - ಶ್ರೀಮಾತೆ ಭುವನೇಶ್ವರಿ"

ಎಂದು ಧ್ಯಾನಮಾಡುತ್ತಾ ಅನಂತಶಾಂತಿಯ ತವರಿನತ್ತ, ಪಯಣ ಬೆಳಸಿದರು.

## ೩೦

ಗತಿಸಿದ ಪ್ರಭುಗಳ ಅಂತ್ಯ ಸಂಸ್ಕಾರ ಕೂಡಲೆ ನೆರವೇರಿಸಲು ಸಾಧ್ಯ ವಿರಲಿಲ್ಲ.

ಕಂಚಿ, ಮಧುರೆ, ಶ್ರೀರಂಗ, ಶೃಂಗೇರಿ, ಕಾಶಿ, ಕಾಶ್ಮೀರ, ಕಲ್ಬುರ್ಗಿ ಗಳಿಗೆ ಅಶ್ವಾರೋಹಿಗಳಾದ ದೂತರು ಸುದ್ದಿಯನ್ನೊಯ್ದರು.

ಪ್ರಭುಗಳ ಪಾರ್ಥಿವ ಶರೀರ ಕೆಡದಂತೆ ಕರ್ಪೂರ, ಗಿಡಮೂಲಿಕೆಗಳ ಚೂರ್ಣದಿಂದ ಮಂಗರಾಜ ಅದನ್ನು ರಕ್ಷಿಸಿಟ್ಟ.

ಕಲ್ಬುರ್ಗಿಗೆ ಸುದ್ದಿ ಮುಟ್ಟಿದೊಡನೆಯೇ ಇಡಿಯ ರಾಜಮಹಲೇ ದುಃಖಗೊಂಡಿತು. ಬಹಮನಿಯ ರಾಜ್ಯಬಾವುಟವನ್ನು ಅರ್ಧಕ್ಕೆ ಹಾರಿಸಿ ಗೌರವಸಲ್ಲಿಸಿದ್ದಲ್ಲದೆ, ರಾಜ್ಯದ ಮಸೀದಿಗಳಲ್ಲಿ, ದೇವಾಲಯಗಳಲ್ಲಿ ಪ್ರಾರ್ಥನೆ, ಪೂಜೆಗಳೇರ್ಪಟ್ಟವು.

ವಕೀಲ್ ಅಸ್ ಸಲ್ತಾನಾ ರೂ ಪರವಾರರ ಅಪ್ಪಣೆ ಪಡೆದು ಗೌರವ

ದಳದೊಂದಿಗೆ ವಾಲಿ ಮಹಮುದರು ವಿಜಯನಗರಕ್ಕೆ ಧಾವಿಸಿದರು.

ನೂತನ ಪ್ರಭುಗಳನ್ನು ಹಲವು ಬಗೆಯಲ್ಲಿ ಸಂತೈಸುತ್ತಾ ವಾಲಿ ಮಹಮುದರು, ಮಾರಪ್ಪನಾಯಕರತ್ತ ತಿರುಗಿ

"ವಿಜಯನಗರಕ್ಕೆ ನಾನು ಬರಬೇಕೆಂದು ಪ್ರೀತಿಯಿಂದ ಕರೆದಿರಿ ನಾಯಕರೇ - ಮಹಾಪುರುಷ ಬುಕ್ಕರಾಯರ ಅಂತ್ಯಕ್ರಿಯೆ ನೋಡಲು ಹೋಗಬೇಕಾಗುತ್ತದೆಂದು ನಾನು ಎಣಿಸಿರಲಿಲ್ಲ. ಇಂಥ ವ್ಯಕ್ತಿಯನ್ನು ಇನ್ನೂ ನಾವು ಕಾಣಲು ಸಾಧ್ಯವೇ? ಯುದ್ಧರಂಗದಲ್ಲಿ ಅವರನ್ನು ನೋಡಿದ್ದೆ- ಅವರೊಂದಿಗೆ ಸೆಣಸಿದ್ದೆ; ಶಾಂತಕಾಲದಲ್ಲಿ ಅವರನ್ನು ನೋಡಿದ್ದೆ - ಅವರ ಕ್ರಿಯಾತ್ಮಕ ಕಾರ್ಯಗಳನ್ನು ಕಣ್ಣಾರೆ ಕಂಡು ತಲೆದೂಗಿದ್ದೆ. ಯುದ್ಧವಿರಲಿ - ಶಾಂತಿಯಿರಲಿ, ಏಕಪ್ರಕಾರವಾದ ಸ್ಥೈರ್ಯ, ಗಾಂಭೀರ್ಯ, - ನಿಮ್ಮ ದುಃಖ ನೀಗಿಸಲು ಯಾವ ಚೈತನ್ಯವೂ ನಮ್ಮಲ್ಲಿಲ್ಲವಲ್ಲ."

ಎಂದು ನೊಂದುಕೊಂಡರು.

ವಾಲಿ ಮಹಮುದರನ್ನು ಹೊಸ ಪ್ರಭುಗಳೇ ಸಂತೈಸಬೇಕಾಯಿತು.

ನಾಲ್ಕನೆಯ ದಿನ ಅಂತ್ಯವಿಧಿಗಳು ನಡೆಯತಕ್ಕದೆಂದು ನಿಶ್ಚಯಿಸಲಾಯಿತು.

ಇಡಿಯ ಭಾರತದ ಹಿಂದೂ ಜನತಾ ಸಮೂಹವೇ ವಿಜಯನಗರದಲ್ಲಿ ಸೇರಿತು.

ಅರಮನೆಯಿಂದ ಪ್ರಭುಗಳ ಪಾರ್ಥಿವ ಶರೀರ ಯಾತ್ರೆ ಹೊರಟಿತು.

ರಾಜ್ಯಲಾಂಛನಗಳನ್ನು ಹಿಡಿದಿದ್ದ ದೂತರು ಮೊದಲು ಹೊರಟರು. ಅವರ ಹಿಂದೆ ಶ್ರೀಹರಿಹರರಾಯರು. ಪ್ರಭುಗಳ ಹಿಂದಿನ ಸಾಲಿನಲ್ಲಿ ಶ್ರೀಗುರು ವಿದ್ಯಾರಣ್ಯರು, ಸಾಯಣಾಚಾರ್ಯರು, ಆರ್ಯ ಕ್ಷೇಮೇಂದ್ರರು, ತ್ರಿಲೋಚನ ಭಟ್ಟಾಚಾರ್ಯರು, ಅವರ ಹಿಂದಿನ ಸಾಲಿನಲ್ಲಿ ಮಾರಪ್ಪ, ಮುದ್ದಪ್ಪ, ವಾಲಿ ಮಹಮುದರು, ಅವರ ಹಿಂದೆ ಸಾಲಂಕೃತವಾಗಿ, ಗತಿಸಿದ ಪ್ರಭುಗಳ ಅವಶೇಷ ಹೊತ್ತಿದ್ದ ಸುವರ್ಣ ರಥ - ರಥದ ಹಿಂದುಗಡೆ ಊರಿನ ಗಣ್ಯರು, ಪ್ರಮುಖರು ಹೊರಟರು.

ಮೆರವಣಿಗೆ ರುದ್ರಭೂಮಿ ಸೇರುವ ವೇಳೆಗೆ ಮಧ್ಯಾಹ್ನವಾಗಿತ್ತು. ಪ್ರಭುಗಳ ಅವಶೇಷವನ್ನು ಸಮಾಧಿಯಲ್ಲಿಳುಹಿದ ಮೇಲೆ ಸಮಸ್ತರೂ ಹೂಪತ್ರಗಳಿಂದ ಪೂಜಿಸಿದರು.

ಜನ ಮಕ್ಕಳಂತೆ ಗೋಳಾಡುತ್ತಿದ್ದರು.

ಎಲ್ಲರೂ ಪೂಜೆ ಮುಗಿಸಿದ ಮೇಲೆ ಸಮಾಧಿ ಮುಚ್ಚಲ್ಪಟ್ಟಿತು.

ವೀರಪುಂಗವ ಬುಕ್ಕರಾಯರು ತಾಯ್ಮಣ್ಣಿನಲ್ಲಿ ಬೆರೆತರು.

ಪ್ರಭುಗಳಿಗೆ ಅಂತಿಮಗೌರವ ಸಲ್ಲಿಸಲು ಪ್ರಕೃತಿಯೂ ಹಿಂದೆ ಬೀಳಲಿಲ್ಲ - ಹೂಮಳೆ ಬಿದ್ದು ವಾತಾವರಣ ಪ್ರಶಾಂತವಾಯಿತು.

## ೩೧

ಬುಕ್ಕರಾಯರ ಉತ್ತರ ಕ್ರಿಯಾದಿಗಳೆಲ್ಲವೂ ಮುಗಿದಮೇಲೆ ಸಕಲರ ಅಭೀಷ್ಟದಂತೆ ಇಮ್ಮಡಿ ಹರಿಹರರಾಯರು ಪಟ್ಟವೇರಿ 'ಮಹಾರಾಜಾಧಿರಾಜ-ರಾಜ ಪರಮೇಶ್ವರ' ಮೊದಲಾದ ಬಿರುದುಗಳನ್ನು ಧರಿಸಿದರು.

ದೊರೆಗಳ ಪಟ್ಟಾಭಿಷೇಕ ಮಹೋತ್ಸವ ಮುಗಿಸಿಕೊಂಡು, ವಾಲಿ ಮಹಮದರು ಕಲ್ಬುರ್ಗಿಗೆ ಪ್ರಯಾಣ ಬೆಳಸಿದರು.

ಎಲ್ಲ ರೀತಿಯಲ್ಲಿಯೂ ದೊರೆಗೆ ನೆರವಾಗಿ ಅವರಿಗೆ ಮಾರ್ಗದರ್ಶನ ಮಾಡುತ್ತಲಿದ್ದ ಶ್ರೀಗುರು ವಿದ್ಯಾರಣ್ಯರು, ದೊರೆಗಳ ರಾಜ್ಯ ನಿರ್ವಹಣ ಕೌಶಲ್ಯ ಕಂಡು ತೃಪ್ತರಾದರು.

ಆರು ತಿಂಗಳು ಕಳೆದುಹೋದವು.

ಒಂದು ದಿನ ಶ್ರೀಗುರುಗಳ ದರ್ಶನಕ್ಕೆಂದು ಬಂದ ದೊರೆಗೆ ಶ್ರೀಗುರುಗಳು,

"ನಾವು ಶೃಂಗೇರಿ ಬಿಟ್ಟು ಬಹಳ ದಿವಸಗಳಾದವು. ಶೃಂಗೇರಿಯಲ್ಲಿ ನಾವು ಮಾಡಬೇಕಾದ ಕೆಲಸ ಹಾಗೇ ಉಳಿದಿದೆ. ನಾವೂ ಸಾಯಣರೂ ಶೃಂಗೇರಿಗೆ ಹೊರಡಲು ತಾವು ಅಪ್ಪಣೆ ಕೊಡಬೇಕು." ಎಂದರು.

ಖಿನ್ನರಾದ ದೊರೆಗಳು,

"ಅನನುಭವಿಗಳಾದ ನಾವು ಕೇವಲ ನಿಮಿತ್ತಮಾತ್ರರಾಗಿದ್ದೇವೆ. ತಾವೇ ನಮ್ಮ ಶಕ್ತಿಭಂಡಾರ. ತಾವು ಹೊರಟುಹೋದರೆ ನಮ್ಮ......"

" ತಾವಾಗಲಿ ಸಾಮ್ರಾಜ್ಯವಾಗಲಿ ನಮ್ಮಮೇಲೇ ಅವಲಂಬಿಸಬಾರದು. ನಮ್ಮ ಜೀವನವೂ ಶಾಶ್ವತವಾದುದಲ್ಲ – ನಾವು ಎಲ್ಲಿದ್ದರೇನು – ವಿಜಯನಗರ ನಮ್ಮ ಮನಸ್ಸಿನಿಂದ ದೂರವಾಗುವುದೇ ?"

" ತಮಗೆ ಪ್ರತಿ ಹೇಳಲು ನಾನು ಸಮರ್ಥನಲ್ಲ. ಸರ್ವಜ್ಞರಾದ ತಾವು ಏನು ಅಪ್ಪಣೆ ಕೊಡಿಸಿದರೂ ಶಿರಸಾವಹಿಸಿ ನಡೆಸುವುದಷ್ಟೇ ನನ್ನ ಧರ್ಮ." ಎಂದರು.

ಭಾದ್ರಪದ ಸಪ್ತಮಿ ಶುಭದಿನ ಸಾಯಣರು ಶ್ರೀಕಂಠನೊಂದಿಗೆ ಶ್ರೀಗುರು ವಿದ್ಯಾರಣ್ಯರು ಶೃಂಗೇರಿಯತ್ತ ಪ್ರಯಾಣ ಬೆಳಸಿದರು.

ದೊರೆಗಳು ಖಿನ್ನರಾಗಿ ಕೂಡುವುದಕ್ಕೆ ಮಾರಪ್ಪನಾಯಕರು ಅವಕಾಶ ಕೊಡಲಿಲ್ಲ. ಹಗಲಿರಳು ಅವರು ನಾಯಕದ್ವಯರ ಜತೆಗೂ ದುಡಿಯ ಬೇಕಾಗಿತ್ತು.

ಒಂದು ದಿನ ಹರಿಹರರಾಯರು ನಸುನಗುತ್ತ,

" ರಾಜನಿರ್ವಹಣ ಇಷ್ಟು ಶ್ರಮಸಾಧ್ಯವಾದುದೆಂದು ನಾನು ಭಾವಿಸಿರ ಲಿಲ್ಲ ಚಿಕ್ಕಪ್ಪಾಜಿ." ಎಂದರು.

" ಎಲ್ಲಕ್ಕಿಂತ ರಾಜ್ಯದ ಹಿತ ದೊಡ್ಡದೆಂದು ನಾವು ಭಾವಿಸುವುದಾದರೆ ಪಡುವ ಶ್ರಮವೆಲ್ಲಾ ಕ್ಷುಲ್ಲಕವಾಗುತ್ತದೆ. ದೊಡ್ಡ ದೊರೆಗಳ ಜೀವನ ನೀವೇ ಕಣ್ಣಾರೆ ಕಂಡಿದ್ದಿರಲ್ಲಾ !"

" ಅವರೆಲ್ಲಿ ನಾವೆಲ್ಲಿ?"

" ಪ್ರಭೂ, ನೀವು ಅವರ ಮಕ್ಕಳು. ಅವರಿಗಿಂತಲೂ ನೀವು ಕೀರ್ತಿ ಶಾಲಿಗಳಾಗಬೇಕು. ನಿಮ್ಮ ಕಾಲದಲ್ಲಿ ವಿಜಯನಗರಕ್ಕೆ ಶತ್ರುಭಯ ತಪ್ಪ ಬೇಕು."

" ಶತ್ರುಗಳಾಗಿದ್ದವರೂ ಈಗ ಮಿತ್ರರಾಗಿದ್ದಾರಲ್ಲಾ !"

" ಬಹುಮನಿರಾಜ್ಯದ ವಿಷಯ ಹೇಳುತ್ತಿರುವಿರಾ ?"

" ಹೂ !"

" ವಾಲಿ ಮಹಮುದರಿರವವರೆಗೆ ಬಹಮನಿಯ ಮೈತ್ರಿಗೆ ಧಕ್ಕೆ ಬರು ವುದಿಲ್ಲ. ಅವರ ತರುವಾಯ........"

" ಸುಲ್ತಾನ್‌ಮಹಮುದರು ಯುದ್ಧಾಕಾಂಕ್ಷಿಗಳೇ !"

" ಸುತ್ತಮುತ್ತಲಿರುವವರು ಅವರನ್ನು ಯುದ್ಧಕಾಂಕ್ಷಿಗಳನ್ನಾಗಿ

ಮಾಡುತ್ತಾರೆ. ಯಾರು ಹೇಗೇ ಇರಲಿ – ನಾವು ಎಚ್ಚರವಾಗಿರುವುದು ಒಳ್ಳೆಯದು" ಎಂದರು.

ಕೆಲವೇ ದಿನಗಳಲ್ಲಿ ಕೊಂಕಣನಾಡಿನಿಂದ ಬಂದ ಸುದ್ದಿ ಮಾರಪ್ಪ ನಾಯಕರ ಅನುಮಾನವನ್ನು ದೃಢಪಡಿಸಿತು.

ಬುಕ್ಕರಾಯರ ಆಳ್ವಿಕೆಯಲ್ಲಿ ಬಾರಕೂರಿನಲ್ಲಿ ಪ್ರಭುತ್ವ ಮಾಡುತ್ತಿದ್ದ ಭೈರಸ ಒಡೆಯರು, ವಿಜಯನಗರದ ಮಾಂಡಲೀಕತನ ಒಪ್ಪಿಕೊಂಡು, ಸಾಮ್ರಾಜ್ಯಕ್ಕೆ ಕಪ್ಪಕಾಣಿಕೆ ಒಪ್ಪಿಸುತ್ತಿದ್ದರು. ವಿಜಯನಗರದ ಪ್ರತಿನಿಧಿಯಾಗಿ ವಸಂತಮಾಧವರಾಯ ಬಾರಕೂರು ಕೋಟೆಯಲ್ಲಿ ವಾಸಿಸುತ್ತಿದ್ದ.

ಬುಕ್ಕರಾಯರು ಗತಿಸಿ, ಹರಿಹರರಾಯರು ಪಟ್ಟಕ್ಕೆ ಬರಲು ಭೈರಸು ಒಡೆಯರು ವಿಜಯನಗರದ ಮಾಂಡಲಿಕತನವನ್ನು ಗಾಳಿಗೆ ತೂರಿ ಸ್ವತಂತ್ರರಾಗಲು ಹವಣಿಸುತ್ತಿದ್ದರು.

ಭೈರಸುಒಡೆಯರ ದುರಭಿಸಂಧಿಯನ್ನು ಸಕಾಲದಲ್ಲಿ ಅರಿತ ವಸಂತ ಮಾಧವರಾಯ, ರಾಜಧಾನಿಗೆ ಪತ್ರ ಬರೆದು ಸಾಮ್ರಾಜ್ಯದ ಗೌರವಕ್ಕೆ ಒದಗಲಿದ್ದ ಸಂಕಷ್ಟವನ್ನು ವಿವರಿಸಿದ.

ಮಾರಪ್ಪನಾಯಕರು ಸ್ವಲ್ಪವೂ ಕಾಲವಿಳಂಬ ಮಾಡಲಿಲ್ಲ. ಆದವಾನಿಯ ದುರ್ಗಪಾಲ ವೀರಭದ್ರದೇವನ ಮಗನಾದ ಚೆನ್ನಪ್ಪನನ್ನು ಬರಮಾಡಿಕೊಂಡು

"ನೀನೀಗಲೇ ಸೈನ್ಯಸಮೇತ ಹೋಗಿ ಕೊಂಕಣನಾಡನ್ನು ಮುತ್ತಿ ಭೈರಸು ಒಡೆಯರ ಪುಂಡತನ ಅಡಗಿಸಬೇಕು. ಭೈರಸು ಒಡೆಯರು ಶರಣಾಗತರಾಗಿ ತಪ್ಪು ಒಪ್ಪಿಕೊಂಡರೆ, ಅವರ ಜತೆ ಯೋಗ್ಯ ಕೌಲು ಕರಾರು ಮಾಡಿಕೊಂಡು ಹಿಂದಿರುಗು. ಭೈರಸು ಒಡೆಯರು ಕಾಳಗ ಬಯಸುವುದಾದರೆ ಕಾಳಗ ನಡೆಯಲಿ" ಎಂದರು.

ಚೆನ್ನಪ್ಪ ಬಾರುಕೂರು ಮುಟ್ಟುವುದರೊಳಗಾಗಿ ಭೈರಸು ಒಡೆಯರು, ಕೋಟೆಯನ್ನಾಕ್ರಮಿಸಿಕೊಂಡು ವಸಂತಮಾಧವರಾಯರನ್ನು ಸೆರೆಯಲ್ಲಿಟ್ಟಿದ್ದರು.

ವಿಜಯನಗರದ ಸೈನ್ಯ ಬಂದ ಸುದ್ದಿ ಕೇಳಿದೊಡನೆಯೇ ಭೈರಸು ಒಡೆಯರ ಜಂಘಾಬಲ ಉಡುಗಿಹೋಯಿತು. ವಸಂತ ಮಾಧವರಾಯರನ್ನು ಸೆರೆಯಿಂದ ಬಿಡಿಸಿ, ಅವರ ಪಾದಗಳ ಮೇಲೆ ಬಿದ್ದು

"ನನ್ನ ಅಪರಾಧ ಕ್ಷಮಿಸಿ ಕಾಪಾಡಿ. ವಿಜಯನಗರದ ಸೈನ್ಯದೆದುರು ನಿಂತು ನಾವು ಬದುಕಬಲ್ಲೆವೇ?" ಎಂದರು.

" ಸೈನ್ಯ ಕಂಡೊಡನೆಯೇ ದೈನ್ಯತೆ ತಳೆದು ಮೈತ್ರಿಯನ್ನಪೇಕ್ಷಿಸುವಿರಿ. ಸೈನ್ಯ ರಾಜಧಾನಿಗೆ ಹಿಂದಿರುಗಿದೊಡನೆಯೇ ಇಲ್ಲಿ ಪುಂಡಾಟ ಆರಂಭಿಸುವಿರಿ. ನಿಮ್ಮನ್ನು ನಂಬುವುದು ಹೇಗೆ ಭೈರಸು ಒಡೆಯರೇ."

" ಮುಚ್ಚಳಿಕೆ ಬರೆದುಕೊಡುತ್ತೇನೆ. ಇನ್ನು ಮೇಲೆ ಎಂದೆಂದಿಗೂ ವಿಜಯನಗರದ ವಿರುದ್ಧ ಚಕಾರ ಶಬ್ದವೆತ್ತುವುದಿಲ್ಲ. ಈ ಬಾರಿಗೆ ನನ್ನನ್ನು ಕಾಪಾಡಿ ಪುಣ್ಯಕಟ್ಟಿಕೊಳ್ಳಿ."

ವಸಂತ ಮಾಧವರಾಯರು, ಚೆನ್ನಪ್ಪ ಸಮಾಲೋಚನೆ ನಡೆಸಿ, ಭೈರಸು ಒಡೆಯರಿಂದ ಮುಚ್ಚಳಿಕೆ ಬರೆಸಿಕೊಂಡು, ಕಪ್ಪಕಾಣಿಕೆ ತೆಗೆದುಕೊಂಡರು.

ಒಂದು ತೊಟ್ಟು ರಕ್ತ ವ್ಯಯವಾಗದಂತೆ ಕೊಂಕಣದ ಪ್ರಕರಣ ಸುಮುಖ ವಾಗಿ ಪರ್ಯವಸಾನ ಹೊಂದಿದುದಕ್ಕೆ ಹರ್ಷಗೊಂಡ ಚೆನ್ನಪ್ಪ ರಾಜಧಾನಿಗೆ ಮರಳಿದ.

ಕಂಪಣ್ಣನಾಯಕರು ದಮನಮಾಡಿ ಬಂದಿದ್ದ ಚೋಳ, ಪಾಂಡ್ಯ, ತುಂಡೀರ ನಾಡುಗಳಲ್ಲಿ ದಂಗೆಗಳೆದ್ದವು. ಮಾರಪ್ಪನಾಯಕರು ಸೈನ್ಯ ಸಮೇತ ರಾಗಿ ದಕ್ಷಿಣಕ್ಕೆ ಹೋಗಿ ಪುಂಡರನ್ನು ತುಳಿದು ಶಾಂತಿ ಸ್ಥಾಪಿಸಿ ಹಿಂದಿರುಗಿದರು.

ರಾಜಧಾನಿಗೆ ಮಾರಪ್ಪನವರು ಹಿಂದಿರುಗಿದ ಕೂಡಲೆ, ರಾಜಮಾತೆ ಗೌರಾಂಬಿಕೆ, ಮೈದುನನಿಗೆ ಹೇಳಿಕಳಿಸಿದರು.

ಮಾರಪ್ಪನಾಯಕರು ಅತ್ತಿಗೆಗೆ ನಮಸ್ಕರಿಸಿ ಕೂಡಲು,

" ಒಂದು ಮುಖ್ಯ ವಿಷಯ ಪ್ರಸ್ತಾಪಿಸಬೇಕಾಗಿತ್ತು. ದಕ್ಷಿಣದ ದಿಗ್ವಿಜಯ ಮುಗಿಸಿಕೊಂಡು ನೀವು ಬರುವುದನ್ನೇ ಕಾಯುತ್ತಿದ್ದೆ."

" ಹೇಳಿ ಅಮ್ಮಾಜಿ."

" ಚಿಕ್ಕ ದೊರೆಗಳು ಪ್ರಾಪ್ತ ವಯಸ್ಕರಾಗಿದ್ದಾರೆ. ಅವರಿಗೆ ಲಗ್ನ ಮಾಡುವ ವಿಷಯ ಯೋಚಿಸಲು ಕಾಲ ಸನ್ನಿಹಿತವಾಗಿದೆಯೆಂದು ಭಾವಿಸುತ್ತೇನೆ."

" ಅವರಲ್ಲಿ ಈ ವಿಷಯ ಪ್ರಸ್ತಾಪಿಸಿರುವಿರಾ ?"

" ನೇರವಾಗಿ ಪ್ರಸ್ತಾಪಿಸಿಲ್ಲ. ಸೂಕ್ಷ್ಮವಾಗಿ ಕೇಳಿದ್ದರಲ್ಲಿ ಅಪ್ಪಾಜಿ ಒಪ್ಪುವ ಸೂಚನೆಯಿತ್ತರು."

" ಹೆಣ್ಣು !"

" ನೋಡಿದ್ದೇನೆ. ಬೈಚಣ್ಣ ದಣ್ಣಾಯಕರ ಸುಪುತ್ರಿ ಪಂಪಾದೇವಿ. ವಂಶವೂ ನಮಗೆ ತಿಳಿದದ್ದೇ. ಹುಡುಗಿ ಶ್ರೀಲಕ್ಷ್ಮಿಯ ಹಾಗಿದೆ."

“ದೊರೆಗಳೊಪ್ಪಿಬಿಟ್ಟರೆ ಆಯಿತಲ್ಲ ಅಮ್ಮಾಜಿ.”

“ಅವರನ್ನು ಒಪ್ಪಿಸುವುದು ಹೇಗೆಂಬ ಗೊಂದಲಕ್ಕೆ ಬಿದ್ದಿದ್ದೇನೆ.”

“ಏಕೆ ?”

“ಈಗ ಕೆಲವು ದಿನಗಳ ಹಿಂದೆ ಸೇವುಣ ವಂಶದ ರಾಮದೇವರಾಯರು, ಅವರ ಸಂಸಾರ ನಮ್ಮ ಅತಿಥಿಗಳಾಗಿ ಬಂದಿದ್ದರು. ರಾಮದೇವರಾಯರ ಮೊಮ್ಮಗಳು ಮಲ್ಲಾಂಬಿಕೆ ಅಪ್ರತಿಮ ಸುಂದರಿ. ಅವಳನ್ನು ನೋಡಿದ ಚಿಕ್ಕ ದೊರೆಗಳು ಅವಳಲ್ಲಿ ಅನುರಕ್ತರಾದಂತಿದೆ.”

ಮಾರಪ್ಪನಾಯಕರು ನಸುನಗುತ್ತಾ

“ನಿಜಕ್ಕೂ ಗೊಂದಲಕ್ಕೆ ಸಿಕ್ಕು ಬಿದ್ದಿದ್ದೀರಿ. ಇದನ್ನು ಬಿಡಿಸಲು ನೀವೇ ಸಮರ್ಥರು.”

“ಪಂಪಾದೇವಿಯ ಪರವಾಗಿ ನೀವು ರಾಯಭಾರ ಮಾಡಬೇಕು.”

“ಮಲ್ಲಾಂಬಿಕೆಯನ್ನೇ ಲಗ್ನವಾಗುವುದಾಗಿ ದೊರೆಗಳು ಹಟ ಹಿಡಿದರೇನು ಮಾಡುವುದು ?”

“ಏನು ಮಾಡಬೇಕು – ನೀವೇ ಹೇಳಿ.”

“ನಾನು ಹೇಳುವ ಪರಿಹಾರ ಅಮ್ಮಾಜಿಯವರು ಒಪ್ಪುವುದಿಲ್ಲ.”

“ಕೇಳಾದರೂ ಕೇಳುವ – ಹೇಳಿ.”

“ಪಂಪಾದೇವಿ, ಮಲ್ಲಾಂಬಿಕೆ ಇಬ್ಬರನ್ನೂ ದೊರೆಗಳು ಲಗ್ನವಾಗಲಿ.”

“ಅವರ ಮನೆಯವರು ಒಪ್ಪಬೇಕಲ್ಲ.”

“ಬೈಚಣ್ಣ ದಣ್ಣಾಯಕರು ತಮ್ಮ ಮಾತು ತೆಗೆದುಹಾಕುವವರಲ್ಲ – ರಾಮದೇವರಾಯರನ್ನು ಒಪ್ಪಿಸುವ ಭಾರ ನನಗಿರಲಿ.”

“ಅಪ್ಪಾಜಿಯವರನ್ನು ಒಪ್ಪಿಸುವುದು ಹೇಗೆ ?”

“ಚಕ್ರವರ್ತಿಯ ಪತ್ನಿಯಾಗಿ, ಚಕ್ರವರ್ತಿಯ ತಾಯಿಯಾಗಿದ್ದರೂ ನೀವಿನ್ನೂ ಮಕ್ಕಳ ಹಾಗಿದ್ದೀರಿ ಅಮ್ಮಾಜಿ – ಮಗ ಚಕ್ರವರ್ತಿ ಎನ್ನುವುದನ್ನು ನೀವು ಕ್ಷಣಕಾಲ ಮರೆತು ‘ಅಪ್ಪಾಜಿ, ನೀವು ಪಂಪಾದೇವಿಯನ್ನು ಲಗ್ನವಾಗುವ ಹಾಗಿದ್ದರೇ ಮಲ್ಲಾಂಬಿಕೆಯನ್ನು ಲಗ್ನವಾಗಬಹುದು. ಇಲ್ಲದಿದ್ದರೆ ಎರಡೂ ಇಲ್ಲ’ ಎಂದು ನೀವು ಹೇಳಿದರಾಯಿತು. ಸಾಮ್ರಾಜ್ಯದ ಚಕ್ರವರ್ತಿಯಾದರೇನು ಅಮ್ಮಾಜಿ – ಮಗ ಮಗನೇ ಅಲ್ಲವೇ ? ಮಾತಾಯಿ, ನಿಮ್ಮ ಮಾತು ಉಲ್ಲಂಘಿಸುವಷ್ಟು ಚಿಕ್ಕದೊರೆಗಳು ಉದ್ಧಟರಲ್ಲ.”

"ನಿಮ್ಮ ಚಿಕ್ಕ ಧೊರೆ ನಿಮ್ಮ ಕಣ್ಣಬೆಳಕು. ಅವರು ಏನು ಮಾಡಿದರೂ ನಿಮಗೆ ಆನಂದ. ಹುಚ್ಚು ಹುಡುಗ – ತಪ್ಪಿ ನಡೆದರೆ ಹಿರಿಯರು ನೀವು ದಂಡಿಸಬೇಕು ನಾಯಕರೇ."

"ನಮ್ಮ ಕಣ್ಮಣಿ – ನಮ್ಮ ಸಾಮ್ರಾಜ್ಯದ ಐಸಿರಿ ತಪ್ಪು ನಡೆಯುವುದೇ ಇಲ್ಲ ಅಮ್ಮಾಜಿ."

ಹೆಮ್ಮೆಯಿಂದ ತಾಯಿಯ ಹೃದಯ ಬಿರಿಯಿತು.

## ೩೨

ಬಹಮನಿ ರಾಜಧಾನಿಯಾದ ಕಲ್ಬುರ್ಗಿಯಲ್ಲಿ ಇರುಳಿನ ತೆರೆಯಲ್ಲಿ ಅನೇಕಾನೇಕ ಘಟನೆಗಳು ನಡೆಯುತ್ತಿದ್ದವು. ಅವುಗಳೆಲ್ಲದರ ಕಾರ್ಯ ಕ್ಷೇತ್ರ ದೊಡ್ಡ ಮಸೀದಿಯ ಇಮಾಮರಾದ ಹಜರತ್ ಅಲ್ಲಾ ಬಕ್ಷರವರ ಮನೆ.

ಭವ್ಯ ಅರಮನೆಯಂತಿದ್ದ ಇಮಾಂಸಾಹೇಬರ ಮನೆಯಲ್ಲಿ ಇಮಾಂ ಸಾಹೇಬರು, ಅವರ ಏಕಮಾತ್ರ ಪುತ್ರಿ ಅಯೇಷಾ ಇಬ್ಬರೇ ಇರುತ್ತಿದ್ದರು. ತಮ್ಮ ಜೀವನ ಸರ್ವಸ್ವವಾಗಿದ್ದ ಮಗಳನ್ನು ಇಮಾಂ ಸಾಹೇಬರು ಅತ್ಯಂತ ಪ್ರೀತಿಯಿಂದ ಸಾಕುತ್ತಿದ್ದರು.

ದೊಡ್ಡ ಸುಲ್ತಾನರ ಅಭಿಮಾನಿಗಳು ದಾವೂದನ ಭಕ್ತರು, ಅಗ್ನಿಭಕ್ಷಕ ರಾಗಿದ್ದ ಕಟು ಮುಸ್ಲಿಮರೆಲ್ಲರಿಗೂ ಇಮಾಮ್‌ಸಾಹೇಬರ ಮನೆ ಆಶ್ರಯ ಸ್ಥಾನವಾಗಿತ್ತು.

ವಾಲಿ ಮುಹಮುದರ ಆಡಳಿತದಲ್ಲಿ ಅತೃಪ್ತಿಗೊಂಡಿದ್ದ ಹಲವು ಕಟು ಧರ್ಮಿಗಳು ಅವರ ಯಶಃಶ್ರೀಯನ್ನು ನೋಡಿ ಕರುಬುತ್ತಾ ಅದಕ್ಕೆ ಮುಸಿ ಬಳಿಯಲೆತ್ನಿಸುತ್ತಿದ್ದರು.

ವಿಜಯನಗರದ ಬಗ್ಗೆ ವಿಶ್ವಾಸತಳೆದಿದ್ದುದೇ ವಾಲಿ ಮುಹಮುದರ ದೊಡ್ಡ

ಅಪರಾಧವಾಗಿತ್ತು. ರಾಜಧಾನಿಯ ಹಿಂದೂ ದೇವಾಲಯಗಳನ್ನು ಭಗ್ನಗೊಳಿಸಿ ಹಿಂದೂಗಳನ್ನು ಪೀಡಿಸಿದ ಪುಂಡರನ್ನೂ ವಾಲಿ ಮಹಮುದ್ ನಿರ್ದಾಕ್ಷಿಣ್ಯವಾಗಿ ದಂಡಿಸಿದರು.

ವಾಲಿ ಮಹಮುದ್ 'ಶುದ್ಧ ಕಾಫಿರ' ಎಂದು ಇಮಾಮ್ ಸಾಹೇಬರೂ ಅವರ ಅನುಯಾಯಿಗಳೂ ನಿರ್ಧರಿಸಿ, ವಾಲಿ ಮಹಮುದ್‌ರನ್ನು ನಿವಾರಿಸಲು ಉಪಾಯ ಹುಡುಕುತ್ತಿದ್ದರು.

ಇಮಾಮ್ ಸಾಹೇಬರ ರಾತ್ರಿ ಸಭೆಗೆ ಒಂದು ದಿನ ಸರ್ದಾರ್ ಜಲಾಲುದ್ದೀನ್, ಹಾಫೀಜ್ ಜಲಂಧುಯನ್ನು ಕರೆದುಕೊಂಡು ಬಂದ.

ಧರ್ಮದ ವಿಷಯದಲ್ಲಿ ಯಾವ ಆಸಕ್ತಿಯನ್ನೂ ಪಡೆಯದಿದ್ದ ಹಾಫೀಜ್‌ನ ತಲೆಗೆ ತಮ್ಮ ಪೂರ್ವಗ್ರಹಗಳನ್ನೆಲ್ಲಾ ತುಂಬಿ ಅವನ ಅಸಂಸ್ಕೃತ ಮನಸ್ಸನ್ನು ಕಲುಷಿತಗೊಳಿಸಿಬಿಟ್ಟರು.

ಹಾಫೀಜ್ ತಾನಾಗಿಯೇ ಇಮಾಂಸಾಹೇಬರ ಮನೆಗೆ ನಿತ್ಯ ಬರಲಾರಂಭಿಸಿದ.

ಅವನು ಮೇಲಿಂದಮೇಲೆ ಬರುತ್ತಿದ್ದ ಕಾರಣ ತಿಳಿದಿದ್ದ ಇಮಾಂ ಸಾಹೇಬರು, ಏನೂ ತಿಳಿಯದವರಂತೆ ನಟಿಸುತ್ತ ಸುಮ್ಮನಿದ್ದು ಪರೋಕ್ಷವಾಗಿ ಅವನನ್ನು ಪ್ರೋತ್ಸಾಹಿಸುತ್ತಿದ್ದರು.

ಅಯೇಷಾ ಗುರುತಾದಂದಿನಿಂದಲೇ ಹಾಫೀಜ್ ಅವಳ ಸ್ನೇಹ ಬೆಳಸಲಾರಂಭಿಸಿದ.

ಉತ್ಕಂಠಿತನಾಗಿದ್ದ ಹಾಫೀಜ್ ಒಂದು ದಿನ ಅಯೇಷೆಯ ಕೈಹಿಡಿದು.

"ನನ್ನವಳಾಗು ಅಯೇಷಾ – ನಿನ್ನ ದಾಸಾನುದಾಸನಾಗಿರಲು ನಾನು ಸಿದ್ಧನಾಗಿದ್ದೇನೆ."

"ಸಹಜಾದಿಯನ್ನೇನು ಮಾಡುವೆ ಹಾಫೀಜ್."

"ಥೂ – ಅದರ ಕುರೂಪ ನೋಡಿ ನೋಡಿ ನನಗೆ ಸಾಕಾಗಿದೆ – ಅಲ್ಲಾ ನನಗೆ ಕಣ್ಣು ಕೊಟ್ಟಿರುವುದು ನಿನ್ನಂಥ ರೂಪಸಿಯ ಸೌಂದರ್ಯ ರಸಾಸ್ವಾದನಕ್ಕೆ!

"ತಂದೆಯವರನ್ನು ಕೇಳಿ ನೋಡು ಹಾಫೀಜ್ – ಅವರು ಒಪ್ಪಿದರೆ ನನ್ನ ಅಭ್ಯಂತರವಿಲ್ಲ."

ಎಂದು ಹೇಳಿದಳು.

ಹುಟ್ಟು ಪಿತೂರಿಕೋರನಾದ ಜಲಾಲುದ್ದೀನ್ ಅಲ್ಲಿಗೇ ತೃಪ್ತನಾಗಲಿಲ್ಲ.

ಒಂದು ದಿನ ಗುಟ್ಟಾಗಿ ಹಾಫೀಜನನ್ನು ಊರ ಹೊರಗೆ ಕರೆದೊಯ್ದು,

"ಸುಲ್ತಾನರ ಭಾವನಾದ ನೀನು ಸುಲ್ತಾನರ ವಂಶಕ್ಕೆ ಸೇರಿದವನಲ್ಲವೇ ಹಾಫೀಜ್" ಎಂದು ಕೇಳಿದ.

"ಇಲ್ಲವೆಂದವರು ಯಾರು ?"

"ರಾಜಮಹಲಿನಲ್ಲಿ ನಿನ್ನ ಸ್ಥಾನವೇನು ?"

"ನಿನ್ನ ಪ್ರಶ್ನೆಯೇ ನನಗರ್ಥವಾಗಲಿಲ್ಲ."

"ದಡ್ಡ – ಶಾಸನಾಧಿಕಾರ ರೂ ಪರವಾರ್ ಬೇಗಂ ಕೈಯಲ್ಲಿ. ಆಡಳಿತಾಧಿಕಾರ ವಾಲಿ ಮಹಮುದನ ಕೈಯಲ್ಲಿ – ನೀನು ಇವರ ಕಾಸ್ದಾರ."

"ನನ್ನ ಗೌರವಕ್ಕೆ ಯಾವ ಕೊರತೆಯೂ ಒದಗಿಲ್ಲ."

"ನಿನಗೆ ವಿಧಾಯಕವಾಗಿರುವ ಸ್ಥಾನವೇ ನಿನ್ನ ಗೌರವದ ಸಂಕೇತವಾಗಿದೆ – ನಿನ್ನ ಸ್ಥಿತಿ ನೋಡಿ ರಾಜಧಾನಿಯಲ್ಲಿ ಎಲ್ಲರೂ ಗಹಗಹಿಸಿ ನಗುತ್ತಿದ್ದಾರೆ."

ಮೊದಲೇ ಕೆಂಪಗಿದ್ದ ಹಾಫೀಜನ ಮುಖ ಮತ್ತಷ್ಟು ಕೆಂಪಗಾಯಿತು.

"ಮಾನಧನನೂ, ಧರ್ಮಾಭಿಮಾನಿಯೂ ಆದ ನೀನು ಕಾಫಿರ್ ವಾಲಿ ಮಹಮುದನ 'ಜೋಹುಕುಂವಾಲಾ' ಆಗಿರುವುದು ಇಸ್ಲಾಮಿಗೇ ಅಪಮಾನಕರವಾಗಿದೆ, ಹಾಫೀಜ್."

"ನಾನೇನು ಮಾಡಬೇಕು ಹೇಳು."

"ಬೇಕಾದ್ದು ಮಾಡಬಹುದು. ಮೊದಲು ವಾಲಿ ಮಹಮುದನನ್ನು ನಿವಾರಿಸಬೇಕು."

"ನಾನೇ !"

"ನೀನೊಬ್ಬನೇ ಅಲ್ಲ, ನಿನ್ನ ನೆರವಿಗೆ ನಾವೆಲ್ಲಾ ಇದ್ದೇವೆ. ಈ ಪಾಷಂಡಿಯ ವಿಧ್ವಂಸನವಾದಲ್ಲದೆ ಭಾರತದಲ್ಲಿ ಇಸ್ಲಾಂ ಬದುಕಲಾರದು."

"ವಾಲಿ ಮಹಮುದರ ಹತ್ಯಾಕಾಂಡದಲ್ಲಿ ನನ್ನ ಕೈವಾಡವಿತ್ತೆಂದು ಗೊತ್ತಾದರೆ ಸುಲ್ತಾನರು ಸುಮ್ಮನಿರುವರೇ ?"

"ಸುಲ್ತಾನ್! ಈ ಆಟದ ಗೊಂಬೆ ಸುಲ್ತಾನನೇ!! ನಿನ್ನಂಥ ವೀರ – ರಣಪಂಡಿತ ಸುಲ್ತಾನನಾಗಿರಬೇಕಾಗಿತ್ತು."

"ಏನಾಡುತ್ತಿರುವೆ ಜಲಾಲುದ್ದೀನ್"

"ನೀನು ಸುಲ್ತಾನನಾಗಲು ಒಪ್ಪುವುದಾದರೆ. ನಿನಗೆ ಬೆಂಬಲ ನೀಡಲು ಇಡಿಯ ಕಲ್ಬುರ್ಗಿಯೇ ಸಿದ್ಧವಾಗಿರುವುದು."

“ ಇಮಾಂಸಾಹೇಬರು ಏನು ಹೇಳುತ್ತಾರೆ.”

“ ಅವರದ್ದೂ ಇದೇ ಅಭಿಪ್ರಾಯ.”

ಹಾಫೀಜನ ತಲೆ ತಿರುಗುತ್ತ ಬಂದಿತು.

“ ಒಂದೆರಡು ದಿನ ಅವಕಾಶಕೊಡು ಜಲಾಲುದ್ದೀನ್ – ಯೋಚಿಸಿ ಹೇಳುತ್ತೇನೆ.” ಎಂದ.

ಸುಲ್ತಾನ್‌ಗಿರಿಯ ವಿಲೋಭನೆ ಹಾಫೀಜನನ್ನು ಒಂದೇ ಸಮನಾಗಿ ಬಾಧಿಸತೊಡಗಿತು.

“ ತಾನಾಗಿ ಸಿಕ್ಕಿರುವ ಅವಕಾಶ ಕಳೆದುಕೊಳ್ಳುವುದೇಕೆ ?

ನಾನೇಕೆ ಸುಲ್ತಾನ್ ಆಗಬಾರದು.”

ಎಂಬ ಭಾವನೆ ಅವನ ಮನಸ್ಸಿನಲ್ಲಿ ಸ್ಥಿರವಾಗಿ ನೆಲಸಿತು.

ಒಂದೆಡೆ ರಾಜ್ಯದಾಹ – ಇನ್ನೊಂದೆಡೆ ಸ್ತ್ರೀಮೋಹ ಹಾಫೀಜನನ್ನು ಹರಿದು ತಿನ್ನಲಾರಂಭಿಸಿದವು.

ಅನಿಶ್ಚಿತ ಸ್ಥಿತಿ ಸಹಿಸಲಾಗದೆ ಒಂದು ದಿನ ಹಾಫೀಜ್ ನೇರವಾಗಿ ಇಮಾಮರಲ್ಲಿ ಈ ವಿಷಯ ಪ್ರಸ್ತಾಪಿಸಿದ. ಇಮಾಮ್ ಸಾಹೇಬರು ತಮ್ಮ ಕೆಂಪುಗಡ್ಡ ಹೆಕ್ಕಿಕೊಳ್ಳುತ್ತ

“ ನನ್ನ ಗಿಣಿಯ ಮರಿಯನ್ನು ನಿನ್ನ ಗಿಡುಗ ಸಹಜಾವಿಯ ಕೈಗೆ ಹಾಕಲು ನನಗಿಷ್ಟವಿಲ್ಲ ಹಾಫೀಜ್” ಎಂದರು.

“ ನಾನು ಆಯೇಷೆಯನ್ನು ಕರೆದುಕೊಂಡು ಈ ರಾಜ್ಯವನ್ನೇ ಬಿಟ್ಟು ಹೋಗುತ್ತೇನೆ.”

“ ಇದರಿಂದ ನನಗೆ ಬಂದ ಲಾಭವೇನು ? ಆಯೇಷೆಯ ಸಹಾಯವಿಲ್ಲದೆ ನಾನು ವೃದ್ಧಾಪ್ಯ ಕಳೆಯುವುದು ಹೇಗೆ ?”

“ ಆಯೇಷೆ ನನಗೆ ದೊರಕುವ ಬಗೆ ಹೇಗೆ ನೀವೇ ತಿಳಿಸಿ.”

“ ಜಲಾಲುದ್ದೀನ್ ಎಲ್ಲವನ್ನೂ ಹೇಳಿರಬೇಕು.”

“ ಹೇಳಿದ್ದಾನೆ.”

“ ಸುಲ್ತಾನರನ್ನು ಮುಗಿಸಿ, ನೀನೇ ಗಾದಿಯೇರು – ಸಂತೋಷವಾಗಿ ಆಯೇಷೆಯನ್ನಿತ್ತು ‘ಷಾದಿ’ ಮಾಡುತ್ತೇನೆ.”

ಹಾಫೀಜ್ ಯಾವ ನಿಶ್ಚಯಕ್ಕೂ ಬರುವ ಸ್ಥಿತಿಯಲ್ಲಿರಲಿಲ್ಲ. ಅವನ ಮನಸ್ಸು ಅಲ್ಲಕಲ್ಲೋಲವಾಯಿತು.

ನಾಲ್ಕು ದಿನಗಳ ತರುವಾಯ ಪಿತೂರಿಕೋರರೆಲ್ಲಾ ಇಮಾಂ ಅಲ್ಲಾ ಭಕ್ಷರ ಮನೆಯಲ್ಲಿ ಸಭೆ ಸೇರಿದರು.

ವಾಲಿ ಮುಹಮುದರನ್ನು ನಿವಾರಿಸಲು ಜಲಾಲುದ್ದೀನ್, ಅವನ ಅನುಯಾಯಿಗಳು ಕೊರಾನಿನ ಮೇಲೆ ಪ್ರಮಾಣಮಾಡಿದರು.

ಧರ್ಮಾಂಧತೆ, ಸ್ವಾರ್ಥದ ಕಳ್ಳುಕುಡಿದಿದ್ದ ಹಾಫೀಜ್, ಸುಲ್ತಾನರನ್ನು ನಿವಾರಿಸುವುದಾಗಿ ಹೇಳಿ, ಕೊರಾನಿನ ಮೇಲೆ ಕೈಯಿಟ್ಟು ಆಣೆಮಾಡಿದ.

ವಾಲಿ ಮುಹಮುದರಿಗಾಗಲಿ ರೂಪರವಾರ್ ಬೇಗಂಗಾಗಲಿ ಯೋಚಿಸಲು ಅವಕಾಶ ಕೊಡದಂತೆ ಒಂದೇ ರಾತ್ರಿ ಎರಡು ಹತ್ಯೆಗಳೂ ಜರುಗಬೇಕೆಂದು ಸಂಚುಕಾರರು ನಿರ್ಧರಿಸಿದರು.

ಹಾಫೀಜನ ಇತ್ತೀಚಿನ ವರ್ತನೆ ಕಂಡು ಅಸ್ತವ್ಯಸ್ತಗೊಂಡಿದ್ದ ರೂಪರವಾರ್ ಒಂದು ದಿನ

"ಏಕೆ ಹಾಫೀಜ್ – ಯಾವಾಗ ನೋಡಿದರೂ ಯೋಚಿಸುತ್ತಿರುವೆ. ಯೋಚನೆಗೇನು ಕಾರಣ ?"

"ಏನೂ ಇಲ್ಲ ಬೇಗಂ"

"ಈಚೆಗೆ ನೀನು ದೊಡ್ಡ ಮಸೀದಿಗೆ ಬಹಳ ಹೋಗಿ ಬರುತ್ತಿರುವೆಯಂತೆ – ಇದ್ದಕ್ಕಿದ್ದಂತೆ ಧರ್ಮಾಭಿಮಾನ ಉಕ್ಕಿಬಂದಿದೆಯೇನು ?"

ಬೆಚ್ಚಿದ ಹಾಫೀಜ್ ತಡವರಿಸುತ್ತಾ

"ಅಂಥದೇನೂ ಇಲ್ಲ ಬೇಗಂ – ಸುಮ್ಮನೆ ಹೋಗಿ ಬರುತ್ತೇನೆ."

"ಇಮಾಮರ ಮಗಳು ಅಯೇಷಾ ಸುಂದರಿಯೆಂಬುದನ್ನು ನಾನು ಬಲ್ಲೆ ಹಾಫೀಜ್"

"ಕಲ್ಬುರ್ಗಿಯಲ್ಲಿ ಸುಂದರಿಯರಿಗೆ ಕ್ಷಾಮವಿಲ್ಲ."

"ಆ ಸುಗ್ಗಿಯ ಲಾಭ ನೀನು ಪಡೆದೀಯೇ – ಹುಷಾರ್."

"ನಿನಗೆಲ್ಲೋ ಹುಚ್ಚು ಬೇಗಂ."

"ರೂಪರವಾರ್ ಆಗಾಜಾನ್‌ಳ ಒಲವನ್ನಷ್ಟೇ ನೀನು ಕಂಡಿದ್ದೀ – ಅವಳ ಕೋಪ ಕಂಡಿಲ್ಲ. ನಾನು ಯಾರಿಗೂ ಎರಡು ಬಾರಿ 'ಹುಷಾರ್' ಎಂದು ಹೇಳಿರುವುದಿಲ್ಲ. ನೀನು ನನ್ನ ಇನಿಯ – ನಿನಗೆ ಹೇಳುತ್ತಿದ್ದೇನೆ – ಹುಷಾರ್."

ಅವಳ ಧ್ವನಿ ಕೇಳಿದ ಹಾಫೀಜ್ ಗಡಗಡನೆ ನಡುಗಿದ.

ಬಖರ್ - ಈದ್ ಹಬ್ಬ ಸಂಭ್ರಮದಿಂದ ನಡೆದಿತ್ತು. ಊರಿಗೆ ಊರೇ ಹಬ್ಬದ ಉತ್ಸಾಹದಲ್ಲಿ ಮೈಮರೆತ್ತಿತ್ತು.

ಅದೇ ರಾತ್ರಿ ತಮ್ಮ ಉದ್ದಿಷ್ಟ ಕಾರ್ಯ ನಿರ್ವಹಿಸಲು ಪಿತೂರಿಕೋರರು ನಿಶ್ಚಯಿಸಿದ್ದರು.

ಪಿತೂರಿಕೋರರಲ್ಲಿ ಒಬ್ಬನಾದ ಸೈಯದ್‌ನನ್ನು ಯಾವದೋ ಧರ್ಮ ಸಂಕಟ ಬಾಧಿಸುತ್ತಿತು.

'ವಾಲಿ ಮಹಮದ್ ಕಾಫಿರ್-ಅವನ ಕಲುಷಿತ ರಕ್ತದಿಂದ ಇಸ್ಲಾಮಿಗೆ ತರ್ಪಣ ಕೊಡಬೇಕಾದುದು ನ್ಯಾಯ. ಆದರೆ ಸುಲ್ತಾನರು - ಮಾಬಾಪ್ ಆಗಿರುವ ಸುಲ್ತಾನರು ನಿರಪರಾಧಿಗಳು - ಅವರ ಹತ್ಯೆ ಅನುಚಿತ'

ಎಂಬ ನಿರ್ಧಾರಕ್ಕೆ ಬಂದವನೇ ರಾಜಮಹಲಿನ ಕಛೇರಿಯಲ್ಲಿ ಷಹಜಾದಿ ರೂಪರವಾರ್ ಬೇಗಮಳನ್ನು ಕಂಡು

"ತಮ್ಮೊಂದಿಗೆ ಗುಟ್ಟಾಗಿ ಮಾತನಾಡಬೇಕಾಗಿದೆ ವಕೀಲ್ ಅಸ್ ಸಲ್ತಾನಾ" ಎಂದ.

ಕಛೇರಿಯ ಒಳಕೋಣೆಯೊಂದನ್ನು ಪ್ರವೇಶಿಸಿದ ರೂಪರವಾರ್

"ಏನು ಹೇಳಬೇಕೆಂದಿರುವೆಯೋ ಬೇಗ ಹೇಳು ಸೈಯದ್" ಎಂದಳು.

ಸೈಯದ್ ಅಂಜಲಿಬದ್ಧನಾಗಿ

"ಈ ರಾತ್ರಿ ರಾಜಮಹಲಿನಲ್ಲಿ ಘೋರ ಅತ್ಯಾಚಾರವಾಗುವುದಿದೆ. ಮುನ್ನೆಚ್ಚರಿಕೆ ಕೊಡಲು ನಾನು ಓಡಿಬಂದೆ."

"ರಾಜಮಹಲಿನಲ್ಲಿಯೇ ?"

"ಹೌದು."

"ಯಾರ ಮೇಲೆ ಅತ್ಯಾಚಾರ ?"

"ಸುಲ್ತಾನರ ಮೇಲೆ.

"ಏನು ಬೊಗಳುತ್ತಿದ್ದೀ ಗುಲಾಮ."

"ಖುದಾ ಮೇಲೆ ಆಣೆಮಾಡಿ ಹೇಳುತ್ತೇನೆ ವಕೀಲ್ ಅಸ್ ಸಲ್ತಾನಾ. ಈ ಸಂಚಿನೊಳಗೆ ದೊಡ್ಡ ಮಸೀದಿಯ ಇಮಾಮ್ ಅಲ್ಲಾ ಭಕ್ಷರೂ ಸೇರಿ ಕೊಂಡಿದ್ದಾರೆ."

"ಇನ್ನು ಯಾರು ಯಾರು ಸೇರಿಕೊಂಡಿದ್ದಾರೆ."

"................"

"ಬೇಗ ಹೇಳು ಗುಲಾಮ"

ಎಂದು ಕೋಪೋದ್ದೀಪಿತಳಾಗಿ ನೆಲವನ್ನು ಪಾದದಿಂದ ಘಾತಿಸಿದಳು.

" ಅಭಯ ನೀಡುವುದಾದರೆ ಹೇಳುತ್ತೇನೆ."

" ಆಗಬಹುದು – ಹೇಳು."

" ಸುಲ್ತಾನರನ್ನು ಸಂಹರಿಸುವ ಹೊಣೆಯನ್ನು ಸರ್ದಾರ್...."

" ಸರ್ದಾರ್........?"

" ಹಾಫೀಜ್ ಜಲಂಧರಿಯವರು ಹೊತ್ತುಕೊಂಡಿದ್ದಾರೆ."

ಷಹಜಾದಿಯ ಮುಖ ಆರಕ್ತವಾಯಿತು. ತುಟಿಗಳು ಒಣಗಿ ಹೋದವು. ದೇಹಾದ್ಯಂತವೂ ಕಂಪಿಸತೊಡಗಿತು.

" ಹಾಫೀಜ್ ಜಲಂಧರಿಯವರಿಗೆ ಇದರಲ್ಲೇನು ಆಸಕ್ತಿ ?"

" ಗಾದಿಯಮೇಲೆ ಅವರನ್ನು ಕೂಡಿಸುವುದಾಗಿ ಇಮಾಮರು, ಜಲಾಲುದ್ದೀನ್ ಮಾತುಗೊಟ್ಟಿದ್ದಾರೆ. ಅಲ್ಲದೆ...."

" ಅಲ್ಲದೆ........"

" ಇಮಾಮರ ಮಗಳು ಅಯೇಷೆಯನ್ನು ' ಷಾದಿ ' ಮಾಡಿಕೊಳ್ಳಲು ಹಾಫೀಜರು ಉತ್ಸುಕರಾಗಿದ್ದಾರೆ."

" ಒಳ್ಳೆಯದು – ನೀನಿನ್ನು ಹೋಗಬಹುದು. ನಮಗೆ ಈ ವಿಷಯ ತಿಳಿಸಿದ ಸಂಗತಿ ಹೊರಬಿದ್ದರೆ ನಿನ್ನ ನಾಲಗೆ ಸೀಳಿಸಿ, ಬೇಟೆ ನಾಯಿಗಳಿಗೆ ನಿನ್ನನ್ನು ಒಪ್ಪಿಸಿಬಿಡುತ್ತೇನೆ."

" ಜಂಟೀ ಸರ್ಕಾರ್. ಗುಲಾಮ್ ಸೈಯದ್ ನಿಮಗೆ ದ್ರೋಹ ಬಗೆಯುತ್ತಾನೆಯೇ ?"

ಷಹಜಾದಿ ತನ್ನ ಕೊರಳಿನಲ್ಲಿದ್ದ ಮುತ್ತಿನ ಹಾರ ತೆಗೆದು ಸೈಯದನತ್ತ ಬಿಸುಡಿ

" ನೀನು ಹೊರಡಬಹುದು."

ಎಂದು ಆಜ್ಞಾಪಿಸಿದಳು.

ರಾತ್ರಿ ರಾಜಮಹಲಿನಲ್ಲಿ ' ದಾವತ್ ' ಒಳ್ಳೆಯ ಹುರುಪಿನಿಂದ ಸಾಗಿತ್ತು. ಸುಲ್ತಾನರು, ಹಾಫೀಜ್ ಮೇರೆ ಮೀರಿ ಕುಡಿದು, ಒಬ್ಬರ ಮೇಲೊಬ್ಬರು ಕವಿತೆ ಕಟ್ಟಿ ಹಾಡಲಾರಂಭಿಸಿದ್ದರು.

ರೂ ಪರವಾರ್ ಮರೆಯಲ್ಲಿಯೇ ನಿಂತು ಅವರನ್ನೇ ಎವೆಯಿಕ್ಕದೆ ನೋಡುತ್ತಿದ್ದಳು.

ಮಧ್ಯ ರಾತ್ರಿ ಕಳೆದಿದೆ.

ಅಪರಿಮಿತವಾಗಿ ಕುಡಿದಿದ್ದ ಸುಲ್ತಾನರು ಅರೆನಿದ್ರೆಯಲ್ಲಿ ಪಲ್ಲಂಕದಮೇಲೆ ಪವಡಿಸಿದ್ದಾರೆ. ಹಾಫೀಜ್ ಮೆಲ್ಲನೆ ತನ್ನ ಒಳ ಅಂಗಿಯಿಂದ ಬಂದು ಕಠಾರಿ ತೆಗೆದು ಸುಲ್ತಾನರ ಹೃದಯಕ್ಕೆ ನೆಡುವಷ್ಟರಲ್ಲಿ ಹಿಂದಿನಿಂದ ಬಂದ ರೂಪರವಾರ್ ಕತ್ತಿಯನ್ನು ಅವನ ಬೆನ್ನಿಗೆ ತಾಗಿಸಿ

"ಕಠಾರಿ ಬಿಸುಡು" ಎಂದಳು.

ಅಧೀರನಾದ ಹಾಫೀಜನ ಕೈಯ್ಯಿಂದ ಕಠಾರಿ ನೆಲಕ್ಕುರುಳಿತು.

ರೂಪರವಾರ್ ಕೂಗಲು ಕಾಪಿನಭಟರು ಬಂದು ಹಾಫೀಜನ ಸೆರೆ ಹಿಡಿದರು.

ಭಟನಾಯಕನನ್ನು ಹತ್ತಿರ ಕರೆದ ಷಹಜಾದಿ

"ವಧಾಸ್ಥಾನಕ್ಕೆ ಈ ನಾಯಿಯನ್ನು ಕರೆದೊಯ್ದು ಈಗಲೇ ಇವನ ಶಿರಚ್ಛೇದನ ಮಾಡಿ – ಬೆಳಗಾಗುವಲ್ಲಿ ಇವನ ದೇಹದ ಮಾಂಸ ಹದ್ದು ಕಾಗೆಗಳಿಗೆ ಗ್ರಾಸವಾಗಬೇಕು."

"ಜಿಹಾ ಸರ್ಕಾರ್."

"ನಿಮ್ಮ ಭಟರನ್ನು ಕಳಿಸಿ ದೊಡ್ಡ ಮಸೀದಿಯ ಇಮಾಮರನ್ನೂ ಅವರ ಮಗಳು ಅಯೇಷೆಯನ್ನೂ, ಜಲಾಲುದ್ದೀನ್‌ನನ್ನೂ ಸೆರೆಹಿಡಿಯಿರಿ"

ಎಂದು ಆಜ್ಞೆ ವಿಧಿಸಿದಳು.

ಬೆಳಗಾಗುವುದರೊಳಗೆ ವಾಲಿ ಮಹಮದರ ಹತ್ಯೆಯಾದ ಸುದ್ದಿ ರಾಜಮಹಲು ತಲುಪಿತು.

ಅಪರಾಧಿಗಳೆಲ್ಲರನ್ನೂ ತಂದು ಸಾಲಾಗಿ ವಕೀಲ್ ಅಸ್ ಸಲ್ತಾನಾ ಮುಂದೆ ಭಟರು ನಿಲ್ಲಿಸಿದರು.

ಷಹಜಾದಿ ತನ್ನ ಸ್ಥಾನಮಾನವನ್ನೂ ಮರೆತು ಅಯೇಷೆಯ ಕೂದಲು ಜಗ್ಗಿ, ಮುಖಕ್ಕೆ ಉಗುಳಿ

"ಇವಳ ಕಣ್ಣು ಕೀಳಿಸಿ, ರಾಜ್ಯದ ಗಡಿಯಾಚೆ ದೂಡಿಬಿಡಿ"

ಎಂದು ಇಮಾಮನ ಕಡೆ ತಿರುಗಿ

"ನೀವು ದೇವದೂತರು ಎಂದು ಭಾವಿಸಿದ್ದೆ. ಸುಲ್ತಾನರ ಪ್ರಾಣಾಪಹರಣಕ್ಕೇ ಹಿಂಜರಿಯದ ನೀವು ದೇವದೂತರಲ್ಲ - ಸೈತಾನನ ದೂತರು–ನಿಮಗೂ ನಿಮ್ಮ ಸಂಗಡಿಗರಿಗೂ ಮರಣದಂಡನೆ ವಿಧಿಸಲಾಗಿದೆ. ತೊಲಗಿರಿ ಇಲ್ಲಿಂದ."

"ಯಾವ ಅಪರಾಧಕ್ಕಾಗಿ ವಕೀಲ್ - ಅಸ್ - ಸಲ್ತಾನಾ."

"ಯಾವ ಅಪರಾಧ ! ಸರ್ದಾರ್ ವಾಲಿ ಮಹಮದರನ್ನು ಕೊಲ್ಲಿಸಿದ

ಅಪರಾಧ – ಸುಲ್ತಾನರ ಮೇಲೆ ಹಾಫೀಜ್ ಜಲಂಧರಿಯನ್ನು ಎತ್ತುಗಟ್ಟಿ ಅವರನ್ನು ಕೊಲ್ಲಿಸಲು ಮಾಡಿದ ಪ್ರಯತ್ನ – "

"ಇವುಗಳನ್ನು ಅಪರಾಧಗಳೆಂದು ಇಸ್ಲಾಮಿನ ನಿಜಭಕ್ತರು ಗಣಿಸಲಾರರು. ವಾಲಿ ಮಹಮದ್ ಕಾಫಿರ್ – ಅವನ ಮಾತು ಕೇಳಿಕೊಂಡು, ಅವನು ಹೇಳುತ್ತಿದ್ದಂತೆ ಕುಣಿಯುತ್ತಿದ್ದ ಸುಲ್ತಾನರೂ ಕಾಫಿರರು. ಕಾಫಿರರಿಗೆ ಶಿಕ್ಷೆ ವಿಧಿಸುವ ಅಧಿಕಾರ ದೊಡ್ಡ ಮಸೀದಿಯ ಇಮಾಮರಿಗಿಲ್ಲವೆಂದು ಹೊಸ ಕಾಯಿದೆ ಆಗಿದೆಯೇನು ?"

"ವಾಲಿ ಮಹಮದರು, ಸುಲ್ತಾನರು ಕಾಫಿರರು – ನೀವೂ, ಜಲಾಲುದ್ದೀನ್ ಧರ್ಮ ರಕ್ಷಕರು ! ನಿಮ್ಮಂಥ ಮತಾಂಧರ ಕೈಗೆ ಸಿಕ್ಕಿಯೇ ಇಸ್ಲಾಮಿಗೆ ಈ ದುರ್ಗತಿ ಬಂದಿರುವುದು. ಕಾಫಿರ್ ವಾಲಿ ಮಹಮದರು ಸಾವನ್ನು ಹೇಗೆ ಎದುರಿಸಿದರೆಂಬುದನ್ನು ಕೇಳಿರುವಿರಾ ಇಮಾಂಸಾಹೇಬ್."

ಇಮಾಂಸಾಹೇಬರು ತುಟಿಪಿಟಕ್ಕೆನ್ನಲಿಲ್ಲ.

ಷಹಜಾದಿ, ಸೈಯದ್‌ನನ್ನು ಕರೆದು

"ವಾಲಿ ಮಹಮದರು ಹೇಗೆ ಸತ್ತರು ಹೇಳು" ಎಂದಳು.

"ನಮ್ಮಲ್ಲಿ ಕೆಲವರು ವಾಲಿ ಮಹಮದರ ಮನೆ ಸುತ್ತುಗಟ್ಟಿದೆವು. ಜಲಾಲುದ್ದೀನರು ಆರು ಮಂದಿ ಸೈನಿಕರೊಂದಿಗೆ ವಾಲಿ ಮಹಮದರ ಮನೆ ಪ್ರವೇಶಿಸಿದರು.

ಮಧ್ಯರಾತ್ರಿ ಕಳೆದಿದ್ದರೂ ವಾಲಿ ಮಹಮದರು ಮಲಗಿರಲಿಲ್ಲ.

ನೆಲದಮೇಲೆ ಕುಳಿತು ಪವಿತ್ರ ಕುರಾನ್ ಓದುತ್ತಿದ್ದರು.

ಬಿಚ್ಚುಗತ್ತಿ ಹಿರಿದು ಎದುರಿಗೆ ನಿಂತ ಜಲಾಲುದ್ದೀನರನ್ನೂ ನಮ್ಮನ್ನು ನೋಡಿ

'ಬನ್ನಿ – ಹಬ್ಬವನ್ನು ಜತೆಯಲ್ಲಿ ಆಚರಿಸೋಣ' ಎಂದರು.

'ನಿಮ್ಮ ಜತೆ ಹಬ್ಬ ಆಚರಿಸಲು ನಾವು ಬಂದಿಲ್ಲ ವಾಲಿ ಮಹಮದ್.'

ಎಂದು ಜಲಾಲುದ್ದೀನ್ ಗುಡುಗಿದರು.

'ಇನ್ನೇತಕ್ಕೆ ಬಂದಿದ್ದೀರಿ ?'

'ನಿಮ್ಮನ್ನು ಕೊಲ್ಲುವುದಕ್ಕೆ.'

'ಕಾರಣ.'

'ನೀವು ಕಾಫಿರ್ – ಹಿಂದೂ ಪಕ್ಷಪಾತಿಗಳು – ವಿಜಯನಗರದ ಗೂಢಚಾರರು ಎಂದು ನಮಗೆ ತಿಳಿದುಬಂದಿದೆ.'

'ಸುಲ್ತಾನರಿಗೆ ದೂರು ಕೊಡಿ – ಸಾರ್ವಜನಿಕರ ಸಮ್ಮುಖದಲ್ಲಿ ನನ್ನ ವಿಚಾರಣೆಯಾಗಲಿ.'

'ಸುಲ್ತಾನರನ್ನೂ ನೀವು ಕಾಫಿರರನ್ನಾಗಿ ಮಾಡಿದ್ದೀರಿ.'

'ಹುಚ್ಚು ಮಾತನಾಡಬೇಡಿ ಜಲಾಲುದ್ದೀನ್. ಸುಲ್ತಾನರ ಬಗ್ಗೆ ನೀವು ಸಣ್ಣ ಮಾತಾಡಿದರೆ, ನಾನು ನಿಮ್ಮಮೇಲೇ ಕತ್ತಿ ಹಿರಿಯ ಬೇಕಾಗುತ್ತದೆ'

ಎಂದೆದ್ದು ಗೋಡೆಯಮೇಲಿದ್ದ ತಮ್ಮ ಕತ್ತಿ ಗುರಾಣಿಗಳನ್ನು ಕೈಗೆತ್ತಿ ಕೊಳ್ಳಲು ಪ್ರಯತ್ನಿಸಿದರು.

ಜಲಾಲುದ್ದೀನರೂ ಅವರ ಭಟರೂ ಅವಕಾಶ ಕೊಡದೆ ಎಲ್ಲರೂ ಏಕ ಕಾಲದಲ್ಲಿ ವಾಲಿ ಮಹಮುದರ ಮೇಲೆ ಬಿದ್ದು ಅವರನ್ನು ಇರಿದರು.

ರಕ್ತದ ಮಡುವಿನಲ್ಲಿ ಬಿದ್ದಿದ್ದ ವಾಲಿ ಮಹಮುದ್‌ರು ಕತ್ತೆತ್ತಿ ಒಮ್ಮೆ ಆಕಾಶದ ಕಡೆ ನೋಡಿ

"ಖುದಾ, ಅಂತಿಮ ಶಾಂತಿಯನ್ನು ಕರುಣಿಸಿ ನನ್ನನ್ನು ಕಾಪಾಡಿದೆ. ಕಷ್ಟಕ್ಕೆ ಸಿಕ್ಕಿರುವ ನನ್ನ ಸುಲ್ತಾನರನ್ನು ಕಾಪಾಡು – ಯಾ ಅಲ್ಲಾ – ಪರವರ್ದಿಗಾರ್"

ಎಂದು ಭಗವಧ್ಯಾನ ಮಾಡುತ್ತಾ ಕೊನೆಯುಸಿರು ಎಳೆದುಬಿಟ್ಟರು."

ಕಂಬನಿಗರೆಯುತ್ತ ಷಹಜಾದಿ ರೋಷ ತಪ್ತಳಾಗಿ

"ಕೇಳಿದಿರಾ ಇಮಾಮ್ ಸಾಹೇಬ್ – ಕಾಫಿರ ಸತ್ತ ಬಗೆಯನ್ನು! ಈ ರಾಜ್ಯದ ಏಕಮೇವಾದ್ವಿತೀಯ ಮಹಾಪುರುಷನನ್ನು, ನಿಶ್ಚಲ ದೇಶಭಕ್ತ ನನ್ನೂ ಆಹುತಿ ತೆಗೆದುಕೊಂಡಿರಿ. ಇನ್ನು ಬಹಮನಿರಾಜ್ಯವನ್ನು ಖುದಾನೇ ಕಾಪಾಡಬೇಕು."

ಎಂದು ಭಟರಿಗೆ

"ಇವರನ್ನು ಇಲ್ಲಿಂದ ತೆಗೆದುಕೊಂಡು ಹೋಗಿ"

ಎಂದು ಆಜ್ಞಾಪಿಸಿ ದುಃಖಸಹಿಸಲಾಗದೆ ಕುಸಿದುಬಿದ್ದಳು.

# ೩೩

ಶ್ರೀಹರಿಹರರಾಯರ ವಿವಾಹ ಮುಹೂರ್ತ ನಿಶ್ಚಯವಾದೊಡನೆಯೇ ಮೊದಲನೆಯ ಆಮಂತ್ರಣ ಪತ್ರಿಕೆ ಶೃಂಗೇರಿಗೆ ಕಳಿಸಲ್ಪಟ್ಟಿತು.

ಆಮಂತ್ರಣ ಪತ್ರಿಕೆ ನೋಡಿದ ಕೂಡಲೆ ಶ್ರೀವಿದ್ಯಾರಣ್ಯರು ಸಾಯಣರು, ಶ್ರೀಕಂಠನೊಂದಿಗೆ ವಿಜಯನಗರಕ್ಕೆ ಆಗಮಿಸಿದರು.

ಸಕಾಲದಲ್ಲಿ ಶ್ರೀಗುರುಗಳು ಬಂದುದನ್ನು ಕಂಡು ದೊರೆಗಳಿಗೆ ಅಪಾರ ಆನಂದವಾಯಿತು.

ಮಾರಪ್ಪನಾಯಕರು ಮಹೋತ್ಸವದ ಸಿದ್ಧತೆಯನ್ನೆಲ್ಲಾ ಶ್ರೀಗುರುಗಳಿಗೆ ನಿವೇದಿಸಿದರು.

" ಬಹಮನಿರಾಜ್ಯಕ್ಕೆ ಆಮಂತ್ರಣ ಹೋಗಿದೆಯಲ್ಲವೇ ?"

" ಹೋಗಿದೆ ಗುರುದೇವಾ."

" ಸುಲ್ತಾನರನ್ನು ತಪ್ಪದೆ ಕರೆದುಕೊಂಡು ಬರುವಂತೆ ವಾಲಿ ಮಹಮುದರಿಗೆ ಒತ್ತಾಯಪೂರ್ವಕವಾಗಿ ತಿಳಿಸಿ."

ಖಿನ್ನಮನಸ್ಕರಾದ ಮಾರಪ್ಪನಾಯಕರು, ಬಹಮನಿರಾಜ್ಯದ, ಎಲ್ಲ ವಿದ್ಯಮಾನಗಳನ್ನೂ ಶ್ರೀಗುರುಗಳಿಗೆ ವಿವರಿಸಿ,

" ದೊಡ್ಡ ಬದುಕು ಬಾಳಿ ವಾಲಿ ಮಹಮುದರು ದೊಡ್ಡ ಸಾವನ್ನೇ ಅಪ್ಪಿದರು" ಎಂದರು.

" ಹುತಾತ್ಮರಾದ ವಾಲಿ ಮಹಮುದರು ತಮ್ಮ ಮುಕ್ತಿಯನ್ನು ಕಂಡುಕೊಂಡರು. ಇನ್ನು ಬಹಮನಿಯ ರೀತಿನೀತಿಗಳೇ ಬದಲಾಗುತ್ತವೆ. ನಮ್ಮ ಎಚ್ಚರದಲ್ಲಿ ನಾವಿರಬೇಕು."

" ಆ ಅಂಶ ನಾವು ಉಪೇಕ್ಷಿಸಿಲ್ಲ ಗುರುದೇವಾ."

" ಈಶ್ವರ ಚಿತ್ತವಿದ್ದಂತಾಗಲಿ."

ಎಂದು ಶ್ರೀಗುರುಗಳು ಮೌನ ತಾಳಿದರು.

ನಿಶ್ಚಿತ ಮುಹೂರ್ತದಲ್ಲಿ ಮಹಾರಾಜಾಧಿರಾಜ, ಪ್ರೌಢಪ್ರತಾಪಿ,

ರಾಜಪರಮೇಶ್ವರ ಶ್ರೀಶ್ರೀ ಇಮ್ಮಡಿ ಹರಿಹರರಾಯರು, ಮಲ್ಲಾಂಬಿಕೆ, ಪಂಪಾದೇವಿಯರನ್ನು ಶ್ರೀ ವಿರೂಪಾಕ್ಷ ಪಂಪಾಂಬಿಕೆಯರ ಸಾಕ್ಷ್ಯವಾಗಿ ಶ್ರೀಗುರು ವಿದ್ಯಾರಣ್ಯರ ಸಮ್ಮುಖದಲ್ಲಿ ವಿವಾಹವಾದರು.

ಹತ್ತು ದಿವಸ ವಿಜಯನಗರ ಆನಂದೋತ್ಸಾಹದಲ್ಲಿ ಮೈಮರೆಯಿತು.

ಪಂಡಿತರು, ಗಮಕಿಗಳು, ಕವಿಗಳು, ಗಾಯಕರು, ನರ್ತಕರು ವಿವಿಧ ಕಲಾಕುಶಲರಿಗೆ ಯೋಗ್ಯ ಸನ್ಮಾನಗಳು ಲಭಿಸಿದವು.

ವಿವಾಹ ಸಮಾರಂಭ ಮುಗಿದಕೂಡಲೆ ಶ್ರೀಗುರು ವಿದ್ಯಾರಣ್ಯರಿಗೆ ಸ್ವಲ್ಪವೂ ಬಿಡುವಿಲ್ಲವಾಯಿತು. ಅವರೂ ಶ್ರೀ ಸಾಯಣರೂ ಪರ್ಣಕುಟಿ ಬಿಟ್ಟೇ ಹೊರಗೆ ಬರುತ್ತಿರಲಿಲ್ಲ.

ಯಾವ ಗಲಭೆಯೂ ಇಲ್ಲದೆ ಮೂರು ವರ್ಷಗಳು ಕಳೆದುಹೋದವು. ಈ ಅವಧಿಯಲ್ಲಿ ಮಲ್ಲಾದೇವಿ, ಪಂಪಾದೇವಿ ಇಬ್ಬರೂ ಪುತ್ರರತ್ನರನ್ನು ಪ್ರಸವಿಸಿದರು. ಪಂಪಾದೇವಿಯ ಮಗನಿಗೆ ಇಮ್ಮಡಿ ಬುಕ್ಕರಾಯನೆಂದೂ, ಮಲ್ಲಾದೇವಿಯ ಮಗನಿಗೆ ದೇವರಾಯನೆಂದೂ ನಾಮಕರಣ ಮಾಡಲಾಯಿತು.

ಒಂದು ದಿನ ದೊರೆಯನ್ನು ಬರಮಾಡಿಕೊಂಡ ಶ್ರೀಗುರುಗಳು,

" ಪೂಜ್ಯರಾದ ನಿಮ್ಮ ದೊಡ್ಡಪ್ಪನವರು ಶ್ರೀ ಶ್ರೀ ಹರಿಹರರಾಯರ ಕಾಲದಲ್ಲಿ ನಾವೂ ಶ್ರೀ ಸಾಯಣಾಚಾರ್ಯರೂ ಸರ್ವದರ್ಶನಸಂಗ್ರಹವನ್ನೂ ವೇದ ಭಾಷ್ಯವನ್ನೂ ಆರಂಭಿಸಿದುದು ಪ್ರಭುಗಳ ಗಮನಕ್ಕೆ ಬಂದಿರಬಹುದು."

" ಗೊತ್ತಿದೆ ಶ್ರೀಗುರುದೇವಾ."

" ತಮ್ಮ ತೀರ್ಥರೂಪರವರು ಜೀವಂತವಾಗಿರುವಾಗಲೇ ಈ ಕೃತಿಗಳನ್ನು ಮುಗಿಸಲು ನಿಶ್ಚಯಿಸಿದ್ದೆವು. ದೇಶದ ಅಶಾಂತಪರಿಸ್ಥಿತಿಯಲ್ಲಿ ಸಾಧ್ಯವಾಗಲಿಲ್ಲ. ಈಗ – ನಿಮ್ಮ ಆಳ್ವಿಕೆಯಲ್ಲಿ ಈ ಕೃತಿಗಳು ಮುಗಿದಿವೆ ಎಂದು ತಿಳಿಸಲು ಸಂತೋಷಿಸುತ್ತೇವೆ."

" ನಾವು ಧನ್ಯರಾದೆವು."

" ಪ್ರಭೂ, ನಮ್ಮ ಕೆಲಸ ಮುಗಿದಂತಾಯಿತು. ಇನ್ನು ನಾವು........"

" ಗುರುದೇವಾ........"

" ನಿಯತಿಯ ಗತಿಯನ್ನರ್ಥಮಾಡಿಕೊಂಡು, ಅದಕ್ಕೆ ಪೂರ್ವಭಾವಿಯಾಗಿ ಹೊಂದಿಕೊಳ್ಳುವುದೇ ಜ್ಞಾನಿಯ ಲಕ್ಷಣ."

ಏನಾಡಬೇಕೆಂಬ ದರಿಯದೆ ದೊರೆಗಳು ಸುಮ್ಮನಾದರು.

ಆರ್ಯ ಕ್ಷೇಮೇಂದ್ರರೂ, ತ್ರಿಲೋಚನಭಟ್ಟಾಚಾರ್ಯರೂ ಆಸ್ಥೆ ವಹಿಸಿ 'ಸರ್ವದರ್ಶನ ಸಂಗ್ರಹ' 'ವೇದಭಾಷ್ಯಗಳ' ಉದ್ಘಾಟನಾ ಸಮಾರಂಭ ವೇರ್ಪಡಿಸಿದರು.

ಒಂದು ವರ್ಷ ಪೂರ್ತಿಯಾಗಿ ಶ್ರೀಗುರುಗಳು, ಸಾಯಣರೂ ತಮ್ಮ ಗ್ರಂಥಗಳ ಬಗ್ಗೆ ಪ್ರವಚನ ನಡೆಸಿದರು.

ವೈದಿಕವಿದ್ಯೆಗೆ ಹರಿಹರರಾಯರು ಇತ್ತಿದ್ದ ಪ್ರೋತ್ಸಾಹದ ದ್ಯೋತಕವಾಗಿ ವಿದ್ವನ್ಮಂಡಲಿ ಅವರಿಗೆ **'ವೈದಿಕ ಮಾರ್ಗಸ್ಥಾಪನಾಚಾರ್ಯ' 'ಕರ್ನಾಟಕ ವಿದ್ಯಾವಿಲಾಸ'** ಪ್ರಶಸ್ತಿಗಳನ್ನಿತ್ತು ಗೌರವಿಸಿತು.

ಒಂದು ದಿನ 'ಗಿರಿವನ'ದಲ್ಲಿ ಶ್ರೀಗುರುಗಳು ಮಂಡಿಸಿದ್ದಾರೆ. ಶ್ರೀಗುರುವಿನ ಪಾದದಡಿ ಕುಳಿತ ಶ್ರೀಕಂಠ ತನ್ನ ಕೆಲವು ಅನುಮಾನಗಳನ್ನು ಸೂಚಿಸಿದ.

ಶ್ರೀಗುರುಗಳು ಸಾವಕಾಶವಾಗಿ ಎಲ್ಲಕ್ಕೂ ಉತ್ತರವಿತ್ತು, ಅವನ ಅನುಮಾನಗಳೆಲ್ಲವನ್ನೂ ಪರಿಹರಿಸಿ,

"ಶ್ರೀಕಂಠ – ಇವತ್ತು ಆರ್ಯ ಕ್ಷೇಮೇಂದ್ರರಿಂದ ನಿನಗೆ ಕರೆ ಬಂದಿತ್ತೇ ?" ಎಂದು ಕೇಳಿದರು.

"ಇಲ್ಲ ಗುರುದೇವಾ."

"ನಾಳೆ ಬರುವುದು – ನೀನು ಹೋಗಿ ಅಗತ್ಯವಾಗಿ ಅವರನ್ನು ಕಂಡು ಬರಬೇಕು."

"..............."

"ಏಕೆ ಎಂದು ಕೇಳಲು ಮನಸ್ಸು ತವಕಪಡುತ್ತಿದೆಯೇನೋ ?"

"ಹೌದು – ಕೇಳಬಹುದೋ ಬಾರದೋ ಎಂದು ಸುಮ್ಮನಿದ್ದೆ."

"ಗೀರ್ವಾಣ ವಿದ್ಯಾಪೀಠದ ವೇದಾಂತಾಚಾರ್ಯ ಪದವಿ ನೀನು ಸ್ವೀಕರಿಸಬೇಕೆಂದು ಆರ್ಯ ಕ್ಷೇಮೇಂದ್ರರ ಇಚ್ಛೆ."

"ತಮ್ಮ ಸನ್ನಿಧಿ ಬಿಟ್ಟು ನಾನು ಹೋಗಲಾರೆ ಗುರುದೇವಾ."

"ನಿನ್ನ ವಿದ್ಯೆ ನಿಸ್ಸಾರ್ಥಕವಾಗಬಾರದು ಶ್ರೀಕಂಠ. ಭಗವತಿ ನಿನಗೆ ಅನುಗ್ರಹಿಸಿರುವ ವಿದ್ಯೆಯನ್ನು ಸಹಸ್ರಾರು ವಿದ್ಯಾರ್ಥಿಗಳಿಗೆ ನೀನು ಹಂಚಿದರೇ ಅದರ ಸಾರ್ಥಕ್ಯ. ಸಾಯಣರೇನೋ ವೇದಭಾಷ್ಯ, ಬರೆದಿಟ್ಟರು – ಅದನ್ನು ಸರಿಯಾಗಿ ವ್ಯಾಖ್ಯಾನ ಮಾಡುವವರು ಬೇಕಲ್ಲವೇ ! ನಿನಗೆ ಕ್ರಮವಾಗಿ ಪಾಠ

ವಾಗಿರುವುದರಿಂದ ನೀನೇ ಈ ಸ್ಥಾನಕ್ಕೆ ಅರ್ಹ."

"ಗುರ್ವಾಜ್ಞೆ"

ಎಂದು ಶ್ರೀಕಂಠ ಒಪ್ಪಿಕೊಂಡ.

ಶಾಲೀವಾಹನ ಶಕ ೧೩೦೯ನೆಯ ಕ್ಷಯ ಸವಂತ್ಸರ ಜೇಷ್ಠ ಬಹುಳ ತ್ರಯೋದಶೀ ಶನಿವಾರ* ಉಷಃಕಾಲಕ್ಕೆ ಮುನ್ನವೇ ಎದ್ದು ಶ್ರೀಗುರು ವಿದ್ಯಾರಣ್ಯರು ಪಂಪಾಸರೋವರಕ್ಕೆ ಹೋಗಿ, ಶುಭ್ರಸ್ನಾತರಾಗಿ ಉದಯಾದಿತ್ಯನಿಗೆ ಅರ್ಘ್ಯ ಅರ್ಪಿಸಿ, ಪಂಪಾನಾಥನ ದೇವಾಲಯಕ್ಕೆ ಬಂದು, ಭಗವಂತನನ್ನೂ ಭಗವತಿಯನ್ನೂ ಕಣ್ತುಂಬ ನೋಡುತ್ತ ನಿಂತರು.

ಶ್ರೀಗುರುಗಳ ಕಣ್ಣುಗಳಿಂದ ಓತ ಪ್ರೋತವಾಗಿ ಆನಂದಭಾಷ್ಪ ಮಿಡಿಯುತ್ತಿತ್ತು.

ಪಂಪಾನಾಥನಿಗೆ ದೀರ್ಘದಂಡ ನಮಸ್ಕಾರ ಹಾಕಿದವರೇ ದೊಡ್ಡ ದಣ್ಣಾಯಕನ ಕೋಟೆಯ ಮೇಲೆ ನಿಂತು ವಿಜಯನಗರವನ್ನೊಮ್ಮೆ ಸಿಂಹಾವಲೋಕನ ಮಾಡಿದರು.

"ಈ ರಾಜ್ಯ ಅಜರಾಮರವಾಗಿ ಬಾಳಲಿ"

ಎಂಬ ಹರಕೆಯೊಂದೇ ಗುರುಗಳ ಮನಸ್ಸಿನಲ್ಲಿದ್ದುದು.

ಕೋಟೆಯಿಂದಿಳಿದು ಬಂದ ಶ್ರೀಗುರುಗಳು ನೇರವಾಗಿ ಅರಮನೆ ಪ್ರವೇಶಿಸಿ, ರಾಜಮಾತೆಯನ್ನು ಕಾಣಲಪೇಕ್ಷಿಸಿದರು.

ಪೂಜೆಯಲ್ಲಿ ಕುಳಿತಿದ್ದ ಗೌರಾಂಬಿಕೆ ಧಾವಿಸಿ ಬಂದು, ಶ್ರೀಗುರುಗಳನ್ನು ಸ್ವಾಗತಿಸಿ, ಅವರನ್ನು ಉಚಿತ ಪೀಠದಲ್ಲಿ ಕೂಡಿಸಿ

"ಭಗವಂತನ ಪೂಜೆಯಲ್ಲಿ ಕುಳಿತಿದ್ದೆ – ಭಗವಂತನೇ ಪ್ರತ್ಯಕ್ಷನಾದ."

"ಅಮ್ಮಾಜಿ, ವಯಸ್ಸಾದರೂ ನನಗೆ ವಿವೇಕ ಬರಲಿಲ್ಲ."

"ಏಕೆ ಗುರುನಾಥ."

"ಇನ್ನೂ ಮೋಹ ಬಾಧಿಸುತ್ತಿದೆ. ದೊಡ್ಡ ದಣ್ಣಾಯಕರ ಕೋಟೆಯ ಮೇಲೆ ನಿಂತು ವಿಜಯನಗರ ದಿಗ್ದರ್ಶನ ಮಾಡಿದೆ – ಏಕೋ ಏನೋ ನಿಮ್ಮ ಮೊಮ್ಮಕ್ಕಳನ್ನು ನೋಡಬೇಕೆನ್ನಿಸಿತು. ಇತ್ತ ಬಂದೆನಮ್ಮಾ!"

"ಮಕ್ಕಳನ್ನು ಕರೆತರುತ್ತೇನೆ."

---

* ಕ್ರಿ.ಶ. ೧೩೮೬

ಎಂದು ಗೌರಾಂಬಿಕೆ ಒಳಗೆ ಹೋಗಿ ಬುಕ್ಕನನ್ನೆತ್ತಿಕೊಂಡು ಪಂಪಾದೇವಿಯೊಂದಿಗೆ ಬಂದಳು. ಅವಳ ಹಿಂದೆ ಮಲ್ಲಾಂಬಿಕೆ ದೇವರಾಯನನ್ನೆತ್ತಿಕೊಂಡು ಬಂದಳು.

ಶ್ರೀಗುರುಗಳು ಇಬ್ಬರು ಮಕ್ಕಳನ್ನೂ ತಮ್ಮ ತೊಡೆಯಮೇಲೆ ಮಲಗಿಸಿಕೊಂಡು.

" ಬುಕ್ಕರಾಯ – ಎಷ್ಟು ದೊಡ್ಡ ಹೆಸರು ಹೊತ್ತಿರುವೆ ಕಂದಾ. ಆ ಬುಕ್ಕರಾಯರಂತೆ ನೀನೂ ಪ್ರತಿಭಾನ್ವಿತನಾಗಿ, ಆಸೇತು ಹಿಮಾಚಲ ಪರ್ಯಂತ ವಿಜಯನಗರವನ್ನು ವಿಸ್ತರಿಸಬೇಕು, ದೇವರಾಯ – ನೀನೂ ನಿನ್ನ ಬುಕ್ಕಣ್ಣ ರಾಮಲಕ್ಷ್ಮಣರಂತಿರಬೇಕಪ್ಪಾ. ನಿನ್ನ ತಾತಂದಿರು ಹರಿಹರರಾಯರು, ಬುಕ್ಕರಾಯರು ಯಾವ ಆದರ್ಶವನ್ನು ಬೆಳಗಿಸಿದರೋ ಅದೇ ಆದರ್ಶ ನಿನ್ನ ಕೈದೀವಿಗೆಯಾಗಲಿ."

ಎಂದು ಮಕ್ಕಳಿಗೆ ಮುದ್ದಿಟ್ಟು ತಾಯಂದಿರ ಕೈಗೆ ಒಪ್ಪಿಸಿ

" ಅಮ್ಮಾಜಿ, ಇನ್ನೂ ದೊರೆಗಳು ಬಂದಿಲ್ಲವೇ ?"

" ಇನ್ನೇನು ಬರಬಹುದು."

" ಬಂದಕೂಡಲೆ ' ಪರ್ಣಕುಟಿ 'ಗೆ ಕಳಿಸಿಕೊಡಿ."

ಎಂದು ಮೇಲಕ್ಕೇಳಲು ರಾಜಮಾತೆ, ಮತ್ತು ರಾಣಿಯರು ಶ್ರೀಗುರುಗಳಿಗೆ ನಮಸ್ಕರಿಸಿದರು.

ಪರ್ಣಕುಟಿಗೆ ಹಿಂದಿರುಗಿದ ಶ್ರೀಗುರುಗಳು, ಸಾಯಣರನ್ನು ಕರೆದು

" ಸಾಯಣರೇ – ಇವತ್ತು ದಿನಶುದ್ಧಿ ಚೆನ್ನಾಗಿದೆ. ನನಗೆ ತಿಳಿದ ಮಟ್ಟಿಗೆ ನನ್ನ ಕರ್ತವ್ಯ ಪೂರೈಸಿದ್ದೇನೆ. ಅಪೂರ್ಣವಾಗಿರುವುದನ್ನು ಪೂರ್ಣಗೊಳಿಸುವುದು ನಿಮ್ಮ ಭಾರ.

ಬಿಕ್ಕಿ ಬಿಕ್ಕಿ ಅಳಲಾರಂಭಿಸಿದ ಸಾಯಣರನ್ನು ಸಮಾಧಾನಗೊಳಿಸುತ್ತಾ ಶ್ರೀಗುರುಗಳು.

" ನೀವು ಮಹಾಜ್ಞಾನಿಗಳು. ಕರ್ಮ ಬಂಧನಗಳನ್ನು ಜ್ಞಾನಖಡ್ಗದಿಂದ ಛೇದಿಸಿರುವಿರಿ. ನೀವೂ ಹೀಗೆ ದುಃಖಿಗಳಾಗುವುದೇ ?— ಜೀವಬ್ರಹ್ಮ ಪರಬ್ರಹ್ಮನನ್ನು ಸೇರುತ್ತಾನೆ – ಸರ್ವಂ ಖಲ್ವಿದಂ ಬ್ರಹ್ಮ."

ದೊರೆಗಳು, ಮಾರಪ್ಪ, ಮುದ್ದಪ್ಪ ನಾಯಕರೊಂದಿಗೆ ಬರಲು ಶ್ರೀಗುರುಗಳು ಅವರನ್ನು ಹತ್ತಿರ ಕರೆದು,

"ಈಗ ನಿಮ್ಮನ್ನು ನಾನು ಪ್ರಭುಗಳೆಂದು ಸಂಬೋಧಿಸುವುದಿಲ್ಲ. ಅಪ್ಪಾಜಿ ಎಂದು ಕರೆಯುತ್ತೇನೆ."

"ನನ್ನ ಭಾಗ್ಯ."

"ಅಪ್ಪಾಜಿ, ಅರಮನೆಗೆ ಹೋಗಿ ಅಮ್ಮಾಜಿ, ರಾಣಿದೇವಿಯರು, ನಿಮ್ಮ ಮಕ್ಕಳನ್ನು ಕಂಡು ಬಂದೆ. ಮನಸ್ಸಿಗೆ ಪರಮಾನಂದವಾಯಿತು. ಭಗವತಿಯ ಇಚ್ಛೆಯನ್ನು ಶಕ್ತ್ಯನುಸಾರ ನಿರ್ವಹಿಸಿದ್ದೇನೆಂದು ಭಾವಿಸಿದ್ದೇನೆ- ಧರ್ಮಕ್ಕೆ ಸ್ವಲ್ಪವೂ ಲೋಪ ಬಾರದಂತೆ ರಾಜ್ಯಭಾರ ನಿರ್ವಹಿಸಿ – ಶ್ರೀ ಭುವನೇಶ್ವರಿ ಸದಾ ನಿಮ್ಮ ಬೆನ್ನುಕಾಯುತ್ತಿರುತ್ತಾಳೆ – ಹೆಚ್ಚೇನು ಹೇಳಲಿ. ಸಕಲರಿಗೂ ಶ್ರೇಯಸ್ಸಾಗಲಿ – ವಿಜಯನಗರ ಚಿರಾಯುವಾಗಿರಲಿ"

ಎಂದು ಹರಸಿ, ಪ್ರಣಾವಾನುಸಂಧಾನಮಾಡಿ ಸಮಾಧಿಸ್ಥಿತಿಗೇರಿದರು.

## ೩೪

ವಿಜಯನಗರ ಸಾಮ್ರಾಜ್ಯಸ್ಥಾಪನಾಚಾರ್ಯವರ್ಯ ಶ್ರೀಗುರು ವಿದ್ಯಾರಣ್ಯರ ಅಂತ್ಯಕ್ರಿಯೆಗಳು ರಾಜಮಹಲಿನ ಮುಂದೆ ನೆರವೇರಬೇಕೆಂದೂ, ಆ ಸ್ಥಾನದಲ್ಲಿ ಭವ್ಯಸ್ಮಾರಕ ಏರ್ಪಡಿಸಬೇಕೆಂದು ಹರಿಹರರಾಯರು ಸೂಚಿಸಿದರು.

ಶ್ರೀ ಸಾಯಣರು ದೊರೆಗಳ ಸಲಹೆಯನ್ನೊಪ್ಪದೆ

"ಪರ್ಣಕುಟಿಯಲ್ಲಿಯೇ ಶ್ರೀಗುರುಗಳ ಸಮಾಧಿಯಾಗಲಿ. ಪಂಪಾನಾಥನ ಸಾನ್ನಿಧ್ಯದಿಂದ ದೂರವಿರಲು ಅವರು ಇಚ್ಛೆಪಡುವುದಿಲ್ಲ. ಅವರ ಸಮಾಧಿಯ ಮೇಲೆ ಭವ್ಯ ಸ್ಮಾರಕ ಅಗತ್ಯವಿಲ್ಲ. ಇಡಿಯ ವಿಜಯನಗರವೇ ಅವರ ಸ್ಮಾರಕ. ಸನ್ಯಾಸಿಯಾಗಿಯೇ ಹುಟ್ಟಿ ಸನ್ಯಾಸಿಯಾಗಿಯೇ ಬಾಳಿ

ಬದುಕಿ, ಸನ್ಯಾಸಿಯಾಗಿಯೇ ಮುಕ್ತಿಪಡೆದ ಸನ್ಯಾಸಿ ನಿರಭ್ರನಾಗಿಯೇ ವಿಶ್ರಮಿಸಲಿ " ಎಂದರು.

ನಿರಾಡಂಬರವಾದ ಆ ಗುಡಿಸಿಲಿನಲ್ಲಿ, ತಾಯ್ಮಣ್ಣಿನ ತಣ್ಪಿನಲ್ಲಿ ಒಂದು ಮಹಾ ಸಾಮ್ರಾಜ್ಯ ಸ್ಥಾಪಿಸಿದ ಪುಣ್ಯಪುರುಷ ಪರಮಶಾಂತಿಗಾಗಿ ಪವಡಿಸಿದ.

**ಓಂ ಶಾಂತಿಃ ಶಾಂತಿಃ ಶಾಂತಿಃ**

